# ಮುನ್ನುಡಿ

ಈ ಹೊತ್ತಗೆಯಲ್ಲಿನ ಕೊನೆಯ ಲೇಖನವು ಶ್ರೀ ಮಾಸ್ತಿಯವರ 'ಜೀವನ' ಮಾಸ ಪತ್ರಿಕೆಗೆ ಬರೆದುದು. ಉಳಿದವುಗಳಲ್ಲಿ ನಾನು ನನ ಮಗಳಿಗೆ ಆಗಿಂದಾಗ ದೆಹಲಿಯಿಂದ ಬರೆದ ಪತ್ರಗಳು. ಗೆಳೆಯರಾದ ಶ್ರೀ ಪರಮೇಶ್ವರಭಟ್ಟರು ಅವುಗಳನ್ನು ಪ್ರಕಟಿಸಬೇಕೆಂದು ಪ್ರೋತ್ಸಾಹಿಸಿದರು. ಮತ್ತೊಬ್ಬ ಮಿತ್ರರು ಶ್ರೀ ಹಬ್ಬು ತಮ್ಮ 'ಉಷಾ ಸಾಹಿತ್ಯ ಮಾಲೆ' ಯಲ್ಲಿ ಮುದ್ರಣ ಮಾಡುವುದಾಗಿ ಮುಂದೆ ಬಂದರು. ಈ ಸ್ನೇಹಿತರ ವಿಶ್ವಾಸದಿಂದ ಈ ಪತ್ರಗಳು ಬೆಳಕಿಗೆ ಬಂದಿವೆ. ಭಾರತದ ಇತಿಹಾಸದಲ್ಲಿ ಒಂದು ಮಹಾಪರ್ವಕಾಲದಲ್ಲಿ ನಾನು ದೆಹಲಿಗೆ ಭಾರತ ಸಂವಿಧಾನ ಸಭೆಯ ಸದಸ್ಯನಾಗಿ ಹೋದೆನು. ದೇಶದ ಮಹಾನಾಯಕರ ಮಧ್ಯೆ ಅತ್ಯಂತ ಸಮೀಪ ಸಂಪರ್ಕದಿಂದ ಭಾರತ ಸಂವಿಧಾನ ಸಭೆಯಲ್ಲಿ ಮತ್ತು ಸಂಪತ್ಸಭೆಯಲ್ಲಿ ಕೆಲಸಮಾಡುವ ಸದವಕಾಶ ದೊರೆಯಿತು. ಈ ಅವಕಾಶ ದೊರೆಯುವುದೆಂದು ನಾನು ಕನಸಿನಲ್ಲಿ ನೆನೆದಿರಲಿಲ್ಲ, ಅದಕ್ಕಾಗಿ ಯಾವ ಪ್ರಯತ್ನವನ್ನೂ ಮಾಡಿರಲಿಲ್ಲ. ಎಲ್ಲ ಮಾನವರ ಭವಿಷ್ಯವನ್ನು ನಿರ್ಧರಿಸುವ ಅವ್ಯಕ್ತ ಶಕ್ತಿಯೊಂದಿದೆ ಎಂದು ಲೋಕಮಾನ್ಯರು ಹೇಳಿದ್ದಾರೆ. ಆ ಅವ್ಯಕ್ತ ಶಕ್ತಿಯ ಕೃಪೆಯಿಂದಲೇ ಈ ಅವಕಾಶ ನನಗೆ ದೊರೆತು, ಅಂತೆಯೇ ಇಂದು ಮುಕ್ತಾಯವೂ ಆಗಿರಬೇಕು. ಈ ಎರಡೂವರೆ ವರ್ಷಗಳಲ್ಲಿ ನಮ್ಮ ಮಹಾನಾಯಕರ ಮುಂದೆ ಉದ್ಭವಿಸಿದ ಸಮಸ್ಯೆಗಳೇನು, ಅವುಗಳ ಪರಿಹಾರಕ್ಕಾಗಿ ಕೈಗೊಂಡ ಕಾರ್ಯಕ್ರಮಗಳೇನು, ಅಂದಿನ ಸಂಶಯ, ಭಯ ಮತ್ತು ನಿರಾಶೆಯ ವಾತಾವರಣದಲ್ಲಿ ಅವರು ತೋರಿದ ಧೈರ್ಯ, ತಾಳ್ಮೆ, ಸಂಯಮ ದೃಷ್ಟಿ ಏನಿತ್ತು—ಇವೆಲ್ಲ ನನ್ನ ಮನಸ್ಸಿನ ಮೇಲೆ ಏನು ಪರಿಣಾಮ ಮಾಡಿದವು, ನನ್ನ ಯೋಚನೆಗಳೇನಿದ್ದವು ಎಂಬುದನ್ನು ನನ್ನ ಮಗಳಿಗೆ ತಿಳಿಸಲು ಯತ್ನಿಸಿದ್ದೇನೆ. ಈ ನನ್ನ ಕಲ್ಪನೆಗಳೆಲ್ಲ ಸರಿ ಇಲ್ಲದಿದ್ದರೂ ಇರಬಹುದು; ಈ ಮಾತುಗಳಿಂದ ಕೆಲವರಿಗೆ ಮನನೊಂದು ನೋವಾಗಬಹುದು. ಕೆಲವು ಮಾತುಗಳನ್ನು ಬರೆಯದಿದ್ದರೂ ಒಳ್ಳಿತೆಂದು ತೋರಬಹುದು. ಏನು ಲೋಪದೋಷಗಳಿದ್ದರೂ ಇದ್ದಂತೆಯೇ ಈ ಪತ್ರಗಳನ್ನು ಪ್ರಕಟಿಸಿದ್ದೇನೆ.

ಅವುಗಳಲ್ಲಿ ನನ್ನ ಆತ್ಮೀಯ ಕೆಲವು ಸಂಗತಿಗಳೂ ಇವೆ. ಇವೆಲ್ಲವುಗಳನ್ನು ಸಹೃದಯರಾಗಿ ಮನ್ನಿಸಬೇಕಾಗಿ ವಾಚಕರಲ್ಲಿ ನನ್ನ ಸವಿನಯ ಬಿನ್ನಹ.

ಈ ಎರಡೂವರೆ ವರ್ಷಗಳಲ್ಲಿ ನಮ್ಮ ತಾಯ್ನಾಡು—ಭಾರತ—ಸರ್ವ ತಂತ್ರ ಸ್ವತಂತ್ರ ಪ್ರಜಾಸತ್ತಾತ್ಮಕ ಜನತಾರಾಜ್ಯವಾಗಿದೆ. ರಾಜ್ಯಗಳಲ್ಲೆಲ್ಲ ಪ್ರಜಾಸತ್ತಾತ್ಮಕ ಜನತಾರಾಜ್ಯವೇ ಸರ್ವೋತ್ಕೃಷ್ಟವೆಂದು ಪ್ಲೆಟೋನ ಮತ. ಆದರೆ ಜನತಾರಾಜ್ಯವು ಯಶಸ್ವಿಯಾಗಬೇಕಾದರೆ ಪ್ರತಿಯೊಬ್ಬ ನಾಗರಿಕನು ತನ್ನ ಉನ್ನತ ಸೇವೆಯನ್ನು ದೇಶದ ಅಭ್ಯುದಯಕ್ಕಾಗಿ ಧಾರೆ ಎರೆಯಲು ಸಿದ್ಧವಿದ್ದರೆ ಮಾತ್ರ ಸಾಧ್ಯ ಎಂದು ಹೇಳುತ್ತಾನೆ. ಜರ್ಮನಿಯ 'ವೀಮಾರ್' ಸಂವಿಧಾನವು ರೂಪುಗೊಂಡಾಗ ಅತಿ ಶ್ರೇಷ್ಠ ಪ್ರಜಾ ಸತ್ತಾತ್ಮಕ ಸಂವಿಧಾನವೆಂದು ಅದನ್ನು ಇಡೀ ಪ್ರಪಂಚವೇ ಸ್ವಾಗತಿಸಿತು. ಆದರೆ ಆ ಪ್ರಜಾಸತ್ತಾತ್ಮಕ ದೃಷ್ಟಿಯೂ ಸಾಮಾನ್ಯ ಪ್ರಜೆಯಲ್ಲಿ ಇಲ್ಲದ ಕಾರಣ ಅಲ್ಲಿಯೇ ಸರ್ವಾಧಿಕಾರಿ ಹಿಟ್ಲರನ ಅವತಾರವೂ ಆಯಿತು. ಯಾವ ಲಿಖಿತ ಸಂವಿಧಾನವೂ ಇಲ್ಲದ ಇಂಗ್ಲೆಂಡಿನಲ್ಲಿ ಪ್ರತಿಯೊಬ್ಬ ಪ್ರಜೆಯಲ್ಲೂ ಒಂದು ಬಗೆಯ ಪ್ರಜಾಸತ್ತಾತ್ಮಕ ದೃಷ್ಟಿಯೂ ನಾಗರಿಕ ಕರ್ತವ್ಯದ ಭಾವನೆಯೂ ಶತಮಾನಗಳಿಂದ ಅವ್ಯಾಹತವಾಗಿ ಬೆಳೆದುಬಂದಿರುವುದರಿಂದ ಯುದ್ಧಕಾಲದ ಮಹಾನಾಯಕ ಚರ್ಚಿಲ್ ಶಾಂತಿಸಮಯದ ಸಾಮಾನ್ಯ ಪ್ರಜೆಯಾಗಬೇಕಾಯಿತು!

ನಮ್ಮ ಹಿರಿಯರೂ "ಯೋ ವೈ ಭೂಮಾತ್ ತತ್ಸುಖಂ ನಾಲ್ಪೇ ಸುಖಮಸ್ತಿ" ಎಂದಿದ್ದಾರೆ "ಕುಲಸ್ಯ ಕಲಹಾ ಜಾತಾ ಮಂತ್ರವೃದ್ಧೈ ರುಪೇಕ್ಷಿತಾಃ । ಗೋತ್ರಸ್ಯ ನಾಶಂ ಕುರ್ವಂತಿ ಗಣಭೇದಸ್ಯ ಕಾರಕಂ ॥ ಭೇದಾಚ್ಚೈವ ಪ್ರದಾನಾಚ್ಚ ಭಿದ್ಯಂತೆ ರಿಪುಭರ್ಗಣಾಃ ॥" ಎಂದು ಮಹಾ ಭಾರತದಲ್ಲಿ ಹೇಳಿದೆ. ಅಲ್ಪತೃಪ್ತಿ, ಜಾತಿಕುಲಗಳ ಕಲಹ, ಪಕ್ಷಪ್ರತಿಪಕ್ಷಗಳ ವೈರ, ಅಧಿಕಾರ ಮೋಹ, ಅಂತಃಕಲಹ, ಪರಸ್ಪರ ವೈಷಮ್ಯ ಇವುಗಳನ್ನು ಅದುಮಿ, ಉನ್ನತ ಆದರ್ಶಸಾಧನೆಯ ಉನ್ನತ ಮಾರ್ಗದಿಂದಲೇ ಸುಖ ಎಂದು ಸಾರಿದ್ದಾರೆ. ಟೀಕೆ ಮಾಡುವುದು ಸುಲಭ; ರಚನಾತ್ಮಕ ಕೆಲಸ ಅತಿ ಕಷ್ಟ. ಪಂಡಿತ ಜವಹರಲಾಲರು ಭಾವನಾವೇಶ ಜೀವಿಗಳು. ಅವರ ಆದರ್ಶ ಇಂದಿನ ಭಾರತದ ಸಮಸ್ಯೆಗಳ ಪರಿಹಾರಕ್ಕೆ ಸಲ್ಲಿಸಿದ ನೀತಿ,

ಸದಾ ಅವರು ಹಗಲುಗನಸು ಕಾಣುವವರು ಎಂಬ ಟೀಕೆ ಕೇಳಬರುತ್ತಿದೆ. ಸರದಾರ ಪಟೇಲರು ಬಂಡವಾಳಗಾರರ ಕೈಗೊಂಬೆ, ಮೂಲಭೂತ ಹಕ್ಕುಗಳನ್ನು ಕಸಕ್ಕಿಂತ ಕಡವೆು ಕಾಣುತ್ತಿದ್ದಾರೆ, ದೇಶದ ರಕ್ಷಣೆಯ ಹೆಸರಿನಲ್ಲಿ ಕೇಂದ್ರ್ರದಲ್ಲಿ ಸರ್ವಾಧಿಕಾರ ಮಾಡುತ್ತಿದ್ದಾರೆ ಎಂಬ ಕೂಗು ಸಹ ಕೇಳಬರುತ್ತಿದೆ. ಈ ಈರ್ವರೂ ತಮ್ಮ ಜೀವನ ಸರ್ವಸ್ವವನ್ನೂ ದೇಶದ ಸ್ವಾತಂತ್ರ್ಯಕ್ಕಾಗಿ ಬಲಿದಾನ ಮಾಡಿದ ಮಹಾ ತ್ಯಾಗಿಗಳೆಂಬುದನ್ನೂ, ಗಾಂಧೀಜಿಯ ಪಟ್ಟಶಿಷ್ಯರೆಂಬುದನ್ನೂ ಮರೆಯುತ್ತಿದ್ದೇವೆ. ಚಳವಳಿಯ ಮನೋಭಾವವು ಇನ್ನೂ ನಮ್ಮಲ್ಲಿ ಹೋಗಿಲ್ಲ. ಇಂದು ರಾಜ್ಯವನ್ನು ಆಳುವವರು ನಾವು, ನಮ್ಮ ಸಮಸ್ಯೆಗಳ ಪರಿಹಾರಕ್ಕೆ ಬೇರೆ ಯಾರನ್ನೂ ಹೊಣೆಯಾಗಿ ಮಾಡುವಂತಿಲ್ಲ, ಯಾರನ್ನೂ ದೂಡುವಂತಿಲ್ಲ—ಅವುಗಳ ಪರಿಹಾರಕ್ಕೆ ನಾವೇ ಹೊಣೆಗಾರರು, ರಾಷ್ಟ್ರದ ಮಹಾ ಸಮಸ್ಯೆಗಳ ಪರಿಹಾರಕ್ಕೆ ನನ್ನದೂ ಶ್ರೇಷ್ಠ ಕರ್ತವ್ಯವಿದೆ ಎಂಬ ಭಾವನೆ ನಮ್ಮಲ್ಲಿ ಪ್ರತಿಯೊಬ್ಬ ನಾಗರಿಕನಲ್ಲೂ ಬೆಳೆಯಬೇಕು ಈ ಎರಡೂ ವರ್ಷಗಳಲ್ಲಿ ಸಾವಿರಾರು ವರ್ಷಗಳ ದಾಸ್ಯದಿಂದ ಮುಕ್ತರಾಗಿದ್ದೇವೆ. ದೇಶವು ಇಬ್ಭಾಗವಾಗಿ ಸೈನ್ಯ, ಆಸ್ತಿಪಾಸ್ತಿ, ಹಣಕಾಸು ಎಲ್ಲವೂ ಹಂಚಿಕೆಯಾಗಿದೆ. ಮೊಟ್ಟಮೊದಲನೆ ಆಸೇತು ಹಿಮಾಚಲಪರ್ಯಂತ ಸರ್ವಸ್ವಾಮ್ಯವುಳ್ಳ ಒಂದು ಕೇಂದ್ರ ಸರಕಾರ ಏರ್ಪಟ್ಟಿದೆ. ಮೇರಕ್ಕೊಂದು ಜನತಾರಾಜ್ಯದ ಸಂವಿಧಾನವು ರೂಪುಗೊಂಡು ಆಚರಣೆಗೆ ಬಂದಿದೆ. ದೇಶದ ಅನೈಕ್ಯತೆಗೆ ಕಾರಣವಾಗಿದ್ದ ೫೬೨ ಸಂಸ್ಥಾನಗಳಲ್ಲಿ ಕೆಲವು ಭಾರತದಲ್ಲಿ ವಿಲೀನವಾಗಿ, ಇನ್ನು ಕೆಲವು ಸಂಕೀರ್ಣಗೊಂಡು ದೊಡ್ಡ ರಾಜ್ಯಘಟಕಗಳಾಗಿ, ಕೆಲವು ಕೇಂದ್ರ ಸರಕಾರದ ಆಡಳಿತಕ್ಕೆ ಬಂದು, ಇನ್ನು ಕೆಲವು ಭಾರತ ಸಂವಿಧಾನದ ರಾಜ್ಯಘಟಕಗಳಾಗಿ ಉಳಿದಿವೆ. ಸರದಾರರು ಕಳೆದ ೨೫೦ ವರ್ಷಗಳ ಭಾರತದ ಛಿದ್ರತೆಯ ಇತಿಹಾಸವನ್ನು ಅಳಿಸಿ, ಭಾರತದ ಐಕ್ಯತೆಯನ್ನು ಸಾಧಿಸಿ, ಶಕ್ತಿಯನ್ನು ಸಂಘಟಿಸಿ ಬಿಸ್ಮಾರ್ಕನನ್ನು ಮರಸಿದ್ದಾರೆ. ಕಾಶ್ಮೀರ ಪ್ರಶ್ನೆ ಮತ್ತು ನಿರಾಶ್ರಿತರ ಪ್ರಶ್ನೆಗಳು ಬಗೆಹರಿಯದಿದ್ದರೂ ಹಿಡಿತದಲ್ಲಿವೆ. ಯುದ್ಧಾನಂತರದ ಹಣಕಾಸಿನ ಸಮಸ್ಯೆ, ಆಹಾರ ಸಮಸ್ಯೆ, ಆರ್ಥಿಕ ಸಮಸ್ಯೆ ಇನ್ನೂ ಬಗೆಹರಿದಿಲ್ಲ. ಒಂದು ಹಿಡಿತಕ್ಕೆ ಸಿಲುಕುವುದರ ಒಳಗೆ ಇನ್ನೊಂದು ಸಮಸ್ಯೆಯು

ಏಳುವುದರಲ್ಲೇ ಇದೆ. ಪ್ರಪಂಚದ ಮಹಾ ರಾಷ್ಟ್ರಗಳಲ್ಲಿ, ಮುಖ್ಯವಾಗಿ ಏಷ್ಯ ಖಂಡದಲ್ಲಿ ಭಾರತಕ್ಕೆ ಅತ್ಯಂತ ಮಹತ್ವದ ಸ್ಥಾನ ದೊರೆತಿದೆ. ನಾವು ಸಾಧಿಸಬೇಕಾದ ಸಮಸ್ಯೆಗಳು ಇನ್ನೂ ಅನೇಕವಿದ್ದರೂ ಟೀಕೆ ಮಾಡುವಾಗ ಈ ಎರಡೂವರೆ ವರ್ಷಗಳಲ್ಲಿ ಎದುರಿಸಿ ಬಗೆಹರಿಸಿದ ಬೃಹತ್ಸಮಸ್ಯೆಗಳನ್ನು ನಾವು ಮರೆಯುತ್ತೇವೆ. ಇಂದು ಭಾರತದ ಪ್ರತಿಯೊಬ್ಬ ಪ್ರಜೆಯಲ್ಲಿ ಬೇಕಾದುದು ರಚನಾತ್ಮಕ ದೃಷ್ಟಿ, ತನ್ನ ಉನ್ನತ ಧ್ಯೇಯ ಮತ್ತು ಕರ್ತವ್ಯದ ಅರಿವು, ಭಾರತವು ಬಾಳಿ ಬದುಕಿದರೆ ತಾನು ಬದುಕುತ್ತೇನೆಂಬ ಕಲ್ಪನೆ, ಇಂದು ರಾಷ್ಟ್ರದ ಸೂತ್ರಗಳನ್ನು ಹಿಡಿದು ಯಾವ ಶ್ರಮವನ್ನೂ ಲೆಕ್ಕಿಸದೆ ತಮ್ಮ ದೇಹವನ್ನೇ ಮುಡುಪಿಟ್ಟಿರುವ ಮಹಾನಾಯಕರಲ್ಲಿ ದೃಢ ವಿಶ್ವಾಸ ಮತ್ತು ಅಚಲ ಶ್ರದ್ಧೆ.

ಈ ಪರ್ವಕಾಲದಲ್ಲಿ ಅವರು ಬಗೆಹರಿಸಿದ ಮತ್ತು ಬಗೆಹರಿಸಬೇಕಾಗಿರುವ ಬೃಹತ್ಸಮಸ್ಯೆಗಳ ಕಿರುನೋಟದ ಕಲ್ಪನೆಯನ್ನು ಈ ಪತ್ರಗಳಿಂದ ಓದುಗರಿಗೆ ದೊರೆತರೆ ನಾನು ಕೃತಕೃತ್ಯನಾದೆ.

ದೆಹಲಿ
೨೪–೩–೫೦

ಸಂ. ವಾ. ಕೃಷ್ಣಮೂರ್ತಿರಾವ್

# ದಿಲ್ಲಿಯ ಪತ್ರಗಳು

೧೬೭, ಕಾನ್‌ಸ್ಟಿಟ್ಯೂಷನ್ ಹೌಸ್,
ನ್ಯೂ ದಿಲ್ಲಿ
೧೨-೭-೪೭

ಆಶೀರ್ವಾದಗಳು.

ನಿನ್ನೆ ಸಂಜೆ ೬-೩೫ಕ್ಕೆ ಸರಿಯಾಗಿ ವಿಮಾನದಲ್ಲಿ ಮುಂಬೈಯಿಂದ ಇಲ್ಲಿಗೆ ಬಂದೆ. ಎಲ್ಲ ಅನುಕೂಲವಾಗಿದೆ. ನನ್ನ ಈ ಯಾತ್ರೆಯ ಅನುಭವದ ವಿಷಯವಾಗಿ ನಿನಗೆ ನಿತ್ಯ ಒಂದು ಕಾಗದ ಬರೆಯಬೇಕೆಂದು ಇದ್ದೇನೆ. ಇದು ಮೊದಲನೆಯ ಕಾಗದ. ಈ ಕಾಗದಗಳನ್ನೆಲ್ಲ ಕೂಡಿಡು. ಕಳೆಯಬೇಡ. ಸಾಧ್ಯವಾದರೆ ಒಂದು ಪುಸ್ತಕ ಮಾಡಬಹುದು.

ಹರಿಹರೇಶ್ವರನ ದರ್ಶನಮಾಡಿ, ರೈಲು ಹತ್ತಿದ ಒಡನೆ ರೈಲಿನಲ್ಲಿ ಮೂರು ಜನ ಕನ್ನಡಿಗರೇ ಸಿಕ್ಕರು. ಇಂಜಿನಿಯರ್ ಕೃಷ್ಣಯ್ಯಂಗಾರ್ ಹಾವೇರಿಯಲ್ಲಿ ಇಳಿದರು. ಉಳಿದವರು ಕಾನ್ಪುರಕ್ಕೆ ಹೊರಟಿದ್ದ ಮಂಗಳೂರಿನ ಎಡ್ವರ್ಡ್ ಮತ್ತು ಮುಂಬೈಗೆ ವ್ಯಾಪಾರಕ್ಕೆ ಹೊರಟಿದ್ದ ಶ್ರೀ ಚಂದ್ರಶೇಖರರಾವ್. ಚಂದ್ರಶೇಖರರಾವ್ ನನಗೆ ಗೊತ್ತು. ಅವರ ತಂದೆ ಡೆಪ್ಯುಟಿ ಕಮಿಷನರ್ ಆಫೀಸಿನಲ್ಲಿ ಶಿರಸ್ತೇದಾರರಾಗಿದ್ದರು. ಆದ್ದರಿಂದ ಸ್ನೇಹವಾಯಿತು. ಹಾವೇರಿಯಲ್ಲಿ ಹಾಸಿಗೆ ಹಾಕಿದ್ದು, ಬೆಳಗಾದಾಗಲೇ ಎಚ್ಚರ. ಮಧ್ಯೆ ಹುಬ್ಬಳ್ಳಿಯಲ್ಲಿ ಮಾತ್ರ ಸ್ವಲ್ಪ ನಿದ್ರಾಭಂಗವಾಯಿತು. ಒಬ್ಬಳು ಕ್ರಿಶ್ಚಿಯನ್ ನರ್ಸ್ ಎಂದು ಕಾಣುತ್ತೆ. ೩೫ ವರ್ಷದ ಹುಡುಗಿ, ಸ್ವಲ್ಪ ತೋಳೆವ ಕೆಂಡ, ನೋಡಿದರೆ ಯುದ್ಧಕಾಲದ ನರ್ಸ್ ಇದ್ದಿರಬಹುದು. ಒಬ್ಬ ೨೫ ವರ್ಷದ ಆಂಗ್ಲೊ ಇಂಡಿಯನ್ ಗಂಟುಹಾಕಿಕೊಂಡು ಗಾಡಿ ಹತ್ತಿದಳು. ಅವರು ಇರುವವರೆಗೂ, ಏನು ತಿಂದಿದ್ದರೋ ಏನೋ—ಗಾಡಿ ಎಲ್ಲ ದುರ್ವಾಸನೆ—

ಎರಡೂ ಫ್ಯಾನಗಳನ್ನೂ ಹಾಕಿ, ಕಿಟಕಿಗಳನ್ನೆಲ್ಲಾ ತೆಗೆದು ಮಲಗ ಬೇಕಾಯಿತು. ಸಾತಾರಾ ರೋಡ್‌ನಲ್ಲೋ ಏನೋ ಇಳಿದರು. ವಾಠಾರ್ ನಲ್ಲಿ ಸ್ನಾನವಿಲ್ಲದೆ ಊಟ. ಎರಡು ಒಣಕಲು ರೊಟ್ಟಿ (ಜೋಳದ್ದು), ಒಂದು ಬಟ್ಟಲು ಕೇಸಕ್ಕಿ ಅನ್ನ, ತುಪ್ಪ ಮೊಸರು—ಸೊನ್ನೆ. ಚವಳಿ ಕಾಯಿ ಪಲ್ಯ, ಬೇಕಾದರೆ ತಿನ್ನಬೇಕು; ಬೇಡವಾದರೆ ಬಿಡಬೇಕು. ಹಾಗೆ ಹಾಯ್‌ಗುಟ್ಟುತ್ತ, ನೀವು ಕೊಟ್ಟ ಚಟ್ಣಿ ಸಹಾಯದಿಂದ ತಿಂದೆವು. ನಾನು, ಚಂದ್ರಶೇಖರ, ಎಡ್ವರ್ಡ್, ಮೂರು ಜನ ಪೂನಾಕ್ಕೆ ಬಂದಾಗ ಸಂಜೆ ೪-೩೦ ಘಂಟೆ. ಒಡನೆ ಇನ್ನೊಂದು ಪ್ಲಾಟ್‌ಫಾರಂ ನಲ್ಲಿ ಜಿ.ಐ.ಪಿ. ಮುಂಬೈ ಪ್ಯಾಸೆಂಜರ್ ಸಿದ್ಧವಿತ್ತು. ಪೂನಾದಿಂದ ಮುಂಬೈವರೆಗೆ ಎಲ್ಲ ವಿದ್ಯುಚ್ಛಕ್ತಿಯಿಂದ ನಡೆಯುವ ರೈಲುಗಳು. ಹೋಗಲು ಒಂದು ಹಳಿ, ಬರುವ ರೈಲುಗಳಿಗೆ ಒಂದು ಹಳಿ. ಹೋಗುವ ರೈಲುಗಳು ಹೋಗುತ್ತಲೇ ಇರುತ್ತವೆ, ಬರುವವು ಬರುತ್ತಲೇ ಇರುತ್ತವೆ. ಪೂನಾ ಬಿಟ್ಟಾಗ ೫ ಗಂಟೆ. ಪೂನಾದಿಂದಲೇ ಮಳೆ ಆರಂಭವಾಯಿತು. ಇಪ್ಪತ್ತೊಂದು ವರ್ಷಗಳ ಹಿಂದೆ ನಾನು ಇದ್ದ ಪೂನಾಕ್ಕೂ ಈಗ್ಯೂ ಗುರ್ತೇ ಸಿಕ್ಕುವಂತೆ ಇಲ್ಲ. ಆದರೆ ಅದೇ ಮೂಲಾ, ಮೂಠಾ ನದಿಗಳ ಸಂಗಮ, ಪಾರ್ವತಿ ಬೆಟ್ಟ, ಚತ್‌ಶೃಂಗಿ ಬೆಟ್ಟಸಾಲು—ನನ್ನ ಮನಸ್ಸಿನಲ್ಲೊಂದು ಅಂತರ್ವಾಣಿ ದೂರದ ಬಾಂಧವ್ಯದ ಕರೆಗೆ ಓಗುಟ್ಟಿತು. ದಾರಿಯುದ್ದಕ್ಕೂ ಮುಂಬೈವರೆಗೂ ಕಲ್ಲುಕಟ್ಟಿ ಸುರಿಯುವ ಮಳೆ. ಲೋನಾವಳಾದಿಂದ ಘಾಟ ಆರಂಭವಾಗುತ್ತೆ. ಸುಮಾರು ೩೦-೪೦ ಬೆಟ್ಟ ಗಳನ್ನು ಕೊರೆದು ತೋಡಿದ ಗುಹೆಗಳಲ್ಲಿ ರೈಲು ಓಡುತ್ತದೆ. ಎರಡು ಕಡೆಯೂ ಮೇಘಮಂಡಲವನ್ನು ತೂರಿ ನುಗ್ಗುವ ಬೆಟ್ಟಸಾಲುಗಳು, ಹಚ್ಚ ಹಸುರಿನ ಹುಚ್ಚೆದ್ದು ಹರಿಯುವ ದಟ್ಟವಾದ ವನಶ್ರೇಣಿ, ಎಲ್ಲಿ ನೋಡಿದರೂ ನೀರು, ಪರ್ವತಶಿಖರಗಳಿಂದ ಚಿಮ್ಮಿ ನೆಗೆಯುವ ಸಹಸ್ರಾರು ಜಲಪಾತಗಳು, ಮದ್ದಾನೆಗಳ ಹಿಂಡಿನೋಪಾದಿಯಲ್ಲಿ ವಾಯುವೇಗದಿಂದ ಓಡುವ ಕಾರ್ಮೋಡಗಳು, ವಿಶ್ವವೇ ಭೈರವ ನಾಟ್ಯವಾಡುತ್ತಿದೆಯೋ ಎಂಬಂತಿತ್ತು. ಈ ಮಧ್ಯೆ ಕಣಿವೆಗಳಲ್ಲಿ

ಸುಳಿದು, ಕಂದಕಗಳನ್ನು ದಾಟಿ, ಗುಹೆಗಳಲ್ಲಿ ಹೊಕ್ಕು ನಾಗರ ಹಾವಿನಂತೆ ಸುತ್ತಿಸುತ್ತಿ ಗಿರಿನೆತ್ತಿಯಿಂದ ಕೆಳಗಿಳಿಯುವ ನಮ್ಮ ರೈಲಿನೋಟ! ಲೋನಾವಳಾದಿಂದ ಕರ್ಜತ್‌ವರೆಗೂ ಇದೇ ನೋಟ. ಮುಂಬೈಗೆ ಬಂದಾಗ ರಾತ್ರಿ ೯-೩೦ ಗಂಟೆ. ಎಡ್ವರ್ಡ್ ಪುಣೆಯಲ್ಲೇ ಅಗಲಿದ. ಚಂದ್ರಶೇಖರ್ ಸಿನೇಮ ಫೊಟೊಗ್ರಫಿಯಲ್ಲಿ ಕೆಲವು ಸಾಮಾನು ಕೊಳ್ಳ ಬಂದಿದ್ದರು. ಅವರ ಆಫೀಸ್ ಸಂಬಂಧಪಟ್ಟ ಹೆಚ್. ಎಸ್. ಕೃಷ್ಣಸ್ವಾಮಿ ಎಂಬುವವರು ಸ್ಟೇಷನ್‌ಗೆ ಬಂದಿದ್ದರು. ಅವರು ಹೆಚ್. ಕೆ. ಎನ್. ಆಚಾರ್ಯರ ಅಣ್ಣ ಶ್ರೀನಿವಾಸಯ್ಯಂಗಾರ್ಯರ ಮಕ್ಕಳು. ಹತ್ತಿರದಲ್ಲೆ ಎಂಪೈರ್ ಹಿಂದೂ ಹೋಟಲು. ಅವರ ಕೋಣೆಯಲ್ಲೇ ಠಿಕಾಣಿ ಊರಿದೆ. ನಾವು ಕೊಟ್ಟ 'ಟೆಲಿಗ್ರಾಂ' ನಾವು ಹೋದ ಮೇಲೆ ಬಂತು. ಆದ್ದರಿಂದ ಇದ್ದ ಒಂದು ಊಟ ಇಬ್ಬರೂ ಹಂಚಿಕೊಂಡೆವು. ಹೊರಗೆ ಮಳೆಯಿದ್ದರೂ ಒಳಗೆ ಮುಂಬೈನಲ್ಲಿ ಬಟ್ಟೆ ಹಾಕುವುದಕ್ಕೆ ಆಗದಷ್ಟು ಸೆಕೆ. ಬೆಳಿಗ್ಗೆ ಎದ್ದು ಪ್ರಾತರ್ವಿಧಿಗಳನ್ನು ಪೂರೈಸಿ ಮೂರು ಫರ್ಲಾಂಗು ಆಚೆ ಇರುವ 'ಏರ್ ಇಂಡಿಯಾ' ಆಫೀಸಿಗೆ ಹೋಗಿದ್ದೆ. ೧೧-೧೫ಕ್ಕೆ ಬನ್ನಿ, ಇಲ್ಲಿಂದ ವ್ಯಾನ ಹೊರಡುತ್ತೆ, ಏರೋಡ್ರೋಂಗೆ ಕರೆದುಕೊಂಡು ಹೋಗುತ್ತೇವೆ, ಎಂದು ಹೇಳಿದರು. ವಾಪ್ಸು ಬಂದು ೯-೩೦ಗೆ ಎಂಪೈರ್ ಹಿಂದೂ ಹೋಟಲಿನಲ್ಲಿ ಊಟ ಮಾಡಿ ೧೦-೩೦ಗೆ ಹೊರಟೆ. ಮುಂಬೈನಲ್ಲೆಲ್ಲಿಯೂ ರಸ್ತೆಯ ಮೇಲೆ ಎಲ್ಲ ಒಂದು ಗೇಣು ಎತ್ತರ ನೀರು. ಎಂಪೈರ್‌ನಿಂದ 'ಏರ್ ಇಂಡಿಯ' ಆಫೀಸ್‌ವರೆಗೆ ಉದ್ದಕ್ಕೂ ಮಧ್ಯೆ ರಸ್ತೆಗಳನ್ನು ಬಿಟ್ಟರೆ 'ಪೋರ್ಟಿಕೊ' ಇದೆ. ಸಹಸ್ರಾರು ಬಡವರಿಗೆ, ಕೂಲಿಗಳಿಗೆ, ಭಿಕ್ಷುಕರಿಗೆ ಈ ಪೋರ್ಟಿಕೊನೆ ಮಲಗುವ ಮನೆ. ಮುಂಬೈನಲ್ಲಿ ಎಲ್ಲವೂ ಕ್ರಮಬದ್ಧ. ಹೋಗಿಬರುವ ಕಾರುಗಳು, ಟ್ರಾಮುಗಳು, ಎಲೆಕ್ಟ್ರಿಕ್ ರೈಲುಗಳು ಲೆಕ್ಕವಿಲ್ಲ. ಸ್ವಲ್ಪ ಎಚ್ಚರ ತಪ್ಪಿದರೆ ಪ್ರಾಣನಾಶವೇ ಖಂಡಿತ. ೯ ಗಂಟೆಗೆ ಒಂದು ಸಲ ಊಟ. ೧೦ ಗಂಟೆಗೆ ಇನ್ನೊಂದು ಸಲ. ಆಗ ತಪ್ಪಿದರೆ ಹೋಟಲಿನಲ್ಲಿ ಊಟಕ್ಕೇನೆ ಚಕ್ಕರ್. 'ಎಂಪೈರ್ ಹಿಂದೂ

ಹೋಟಲಿ'ನ ಮಹಡಿಯ ಮೇಲೆ ನಿಂತು ಕೆಳಗೆ ನೋಡಿದರೆ ಕಲ್ಲು ಕಟ್ಟಿ ಮಳೆ ಸುರಿಯುತ್ತಿದ್ದರೂ ಪ್ರತಿಯೊಂದು ಬಸ್ಸು, ಟ್ರಾಮು ಭರ್ತಿ. ಇಳಿಯುವವರು ಸಾವಿರಾರು ಜನ, ಹತ್ತುವವರು ಸಾವಿರಾರು ಜನ. ಸ್ಕೂಲ್ ಹುಡುಗರು, ಹೆಂಗಸರು, ಗಂಡಸರು, ಆಫೀಸುಗಳಿಗೆ ಹೋಗುವವರು, ವ್ಯಾಪಾರಸ್ಥರು ಹೇಗೆ ಕ್ರಮಬದ್ಧವಾಗಿ ಹೋಗು ತ್ತಾರೆಂಬುದನ್ನು ನೋಡಬೇಕಾದ್ದು ಒಂದು ದೃಶ್ಯ. ನಾವು ಹತ್ತು ಜನ ಇದ್ದರೆ ಹತ್ತು ದಾರಿ ಹೋಗಿ ವಾಹನಗಳ ಓಡಾಟಕ್ಕೆ ಅಡ್ಡ ಬರುವಂತೆ ರಸ್ತೆಯಲ್ಲಿ ನಮ್ಮ ಆಸ್ತಿ ಎಂಬಂತೆ ಅಲೆದಾಡುತ್ತೇವೆ. ಮುಂಬೈಯಲ್ಲಿ ಹಾಗೆ ಬೇಹುಷಾರಾಗಿದ್ದರೆ ಮರುಕ್ಷಣವೇ ಸ್ಮಶಾನ ಯಾತ್ರೆ! ಎಂಪೈರ್ ಹಿಂದೂ ಹೋಟಲು ಊಟ ಚೆನ್ನಾಗಿತ್ತು. ವಿಕ್ಟೋರಿಯಾ ಟರ್ಮಿನಸ್ ರೈಲ್ವೆ ಸ್ಟೇಷನ್ ಪಕ್ಕದಲ್ಲಿ ಇದೆ. ಒಂದು ಸೀಟ್ ಬೇಕಾದರೆ ಎಂಟು ದಿನ ಮುಂಚೆ ಬರೆದು ರಿಸರ್ವ್ ಮಾಡಿಸ ಬೇಕು. ಜಾಗ ಸಾಲದೆ, ಓಡಾಡುವ ದಾರಿಯಲ್ಲೆಲ್ಲ ಮಂಚಗಳನ್ನು ಹಾಕಿ ಕೊಂಡು ಮಲಗಿದ್ದರು.

೧೦-೩೦ಗೆ 'ಏರ್ ಇಂಡಿಯ' ಆಫೀಸಿಗೆ ಬಂದೆ. ಹೋದ ಒಡನೆ ನನ್ನನ್ನು, ಸಾಮಾನನ್ನು ತೂಕಹಾಕಿದರು. ಸಾಮಾನಿಗೆ ನನ್ನ ಹೆಸರಿನ ಚೀಟಿ ಅಂಟಿಸಿದರು. ಬಣ್ಣದ ಕಲ್ಲು ಜೋಡಿಸಿದ ನೆಲ, ಗೋಡೆಗಳ ಮೇಲೆ ಅಜಂತ ಚಿತ್ರಕಲೆಯ ವರ್ಣಚಿತ್ರ—ರುಕ್ಮಿಣಿಯನ್ನು ಕೃಷ್ಣ ಕರೆದೊಯ್ಯುವ ಚಿತ್ರ. ಗೋಡೆಯಲ್ಲೇ ಅಡಗಿದ್ದು ಮಧ್ಯಾಹ್ನ ವಾದರೇ ಬೆಳಕು ಮಾತ್ರ ಚೆಲ್ಲುವ ವಿದ್ಯುದ್ದೀಪಗಳು, ವಿನಯದಿಂದ ಕೇಳಿದ್ದಕ್ಕೆಲ್ಲ ನಗುಮುಖದಿಂದ ಉತ್ತರಕೊಡುವ ಆಂಗ್ಲೊ ಇಂಡಿಯನ್ ಹುಡುಗಿಯರು (ಅವರೇ ಗುಮಾಸ್ತರುಗಳು ಅಲ್ಲಿ). ಕಾಯುವ ಸಮಯ ದಲ್ಲಿ ಕುಳಿತುಕೊಳ್ಳಲು ಮಖಮಲ್ಲು ಹೊದೆಸಿದ, ಯಾವ ಕಡೆ ಬೇಕೆಂದರೆ ತಿರುಗುವ ಸುಖಾಸನಗಳು. ಓದಲು ಇಂಗ್ಲೀಷ್ ಮಾಸ ಪತ್ರಿಕೆಗಳು. ೧೧ ಗಂಟೆಗೆ ಹೈದರಾಬಾದಿಗೆ ಹೋಗುವ ಪ್ರಯಾಣಿಕರು ಹೊರಟರು. ೧೧-೨೦ಕ್ಕೆ ದೆಹಲಿಗೆ ಹೋಗುವವರನ್ನು ಕರೆದುಕೊಂಡು (ಅವರದೇ

ಮೋಟಾರಿನಲ್ಲಿ) ೨೦ ಮೈಲಿ ಆಚೆ ಇರುವ 'ಸ್ಯಾಂತಾಕ್ರೂಜ್' 'ಏರ್‌ಪೋರ್ಟ' ವಿಮಾನ ನಿಲ್ದಾಣಕ್ಕೆ ಕರೆದುಕೊಂಡು ಹೋದರು. ನಾವು ನಿಲ್ದಾಣದಲ್ಲಿರುವಾಗಲೇ ಮದ್ರಾಸಿನಿಂದ, ದೆಹಲಿಯಿಂದ, ಹೈದರಾಬಾದಿನಿಂದ ವಿಮಾನಗಳು ಬಂದವು. ಹೈದರಾಬಾದಿಗೂ ಒಂದು ಹೊರಟಿತು. ನಿಲ್ದಾಣವೆಂದರೆ ದೊಡ್ಡ ವಿಶಾಲವಾದ ಮೈದಾನ. ವಿಮಾನವು ನೆಲಕ್ಕೆ ಇಳಿಯುವಾಗ, ಅಥವಾ ನೆಲವನ್ನು ಬಿಟ್ಟು ಏರುವಾಗ ಸ್ವಲ್ಪ ದೂರ ನೆಲದ ಮೇಲೆ ಓಡುತ್ತದೆ. ಅದಕ್ಕೆ ಅವಕಾಶ ವಾಗುವಂತೆ ಆ ಮೈದಾನದಲ್ಲೆಲ್ಲ ಸುತ್ತಲೂ ಸೀಮೆಂಟ್ ಕಾಂಕ್ರೀಟ್ ಹಾಕಿ, ಅಗಲವಾದ ರಸ್ತೆಗಳನ್ನು ಮಾಡಿರುತ್ತಾರೆ. ಅದರಿಂದ ನೆಲವನ್ನು ಮುಟ್ಟಿ ಓಡಿ, ಓಟದ ವೇಗ ಕಡಿಮೆ ಮಾಡಿಕೊಂಡು ನಿಲ್ಲುವುದಕ್ಕೂ, ಮೇಲೇರುವಾಗ ಓಡಿ ಓಡಿ ವೇಗವನ್ನು ಹೆಚ್ಚಿಸಿ ಕೊಂಡು ಏರುವುದಕ್ಕೂ ಅನುಕೂಲ. ವಿಮಾನ ನಿಲ್ದಾಣವು ಒಂದು ರೈಲ್ವೆ ಸ್ಟೇಷನಂತೆ. ಹೋಗುವವರು, ಬರುವವರು, ಕಳಿಸುವವರು, ಎದುರುಗೊಳ್ಳುವವರು ಅಲ್ಲಿ ಇದ್ದೇ ಇರುತ್ತಾರೆ. ಕಂಪೆನಿಯವರೇ ಪ್ರಯಾಣಿಕರಿಗೆ ಟೀ, ಬಿಸ್ಕತ್, ಕ್ರಷ್ ಮುಂತಾದ ಪಾನೀಯ ಉಪ ಹಾರ ಕೊಡುತ್ತಾರೆ. ಸ್ವಲ್ಪ ಇಂಜಿನ್ ತೊಂದರೆಯಿಂದ ಮುಂಬೈ ನಾವು ಬಿಟ್ಟಾಗ ೧ ಗಂಟೆ. ಅಹಮದಾಬಾದ್ ಸೇರಿದಾಗ ೩ ಗಂಟೆ. ದೆಹಲಿ ಸೇರಿದಾಗ ೬-೩೫. ಅಹಮದಾಬಾದ್ ಸುಮಾರು ಮಧ್ಯ ದೂರದಲ್ಲಿದೆ. ಮುಂಬೈಗೂ ದೆಹಲಿಗೂ ೮೦೦ ಮೈಲಿ ಆಗಬಹುದು. ನನ್ನ ವಿಮಾನ ಪ್ರಯಾಣವು ಮೊದಲ ಅನುಭವವಾದರೂ ಬಹಳ ಸುಖವಾಗಿತ್ತು. ಪ್ರಯಾಣಿಕರು ೨೧ ಜನ, ಒಬ್ಬ ಪೈಲಟ್, ಒಬ್ಬ ರೇಡಿಯೋ ಆಫೀಸರ್, ಒಬ್ಬ ಉಪಚಾರಿಕೆ ಇಷ್ಟು ಮಾತ್ರ ಇದ್ದೆವು. ಕ್ಯಾಪ್ಟನ್ ಪಾಟ್ನಿಕ್ ವಾಮ್‌ಲಿಜ್ ಉಪಚಾರಿಕೆ ಮಿಸ್ ರೇನ್ ಬ್ರಿಜ್. ವಿಮಾನದಲ್ಲಿ ಒಂದು ಕಡೆ ಇಬ್ಬರ ಹಿಂದೆ ಇಬ್ಬರಂತೆ ೧೪ ಜನ (ಏಳು ಸಾಲುನಲ್ಲಿ), ಮಧ್ಯೆ ಓಡಾಡಲು ದಾರಿ, ಅನಂತರ ಪುನಃ ಒಬ್ಬರ ಹಿಂದೆ ಪುನಃ ಏಳು ಜನ. ಹಿಂದೆ ಸಾಮಾನುಗಳು ಇಡಲು ಸ್ಥಳ. ಮುಂದೆ

ಪೈಲಟ್ ಮತ್ತು ಆತನ ಅಧಿಕಾರಿಗಳಿಗೆ ಸ್ಥಳ. ಒಬ್ಬೊಬ್ಬರಿಗೂ ಒಂದೊಂದು ಸ್ಥಳ. ಒಡನೆ ಕಿವಿಗೆ ಹತ್ತಿ ಇಟ್ಟುಕೊಳ್ಳಬೇಕು, ಇಲ್ಲದಿದ್ದರೆ ಕಿವಿ ಸೀಳಿಹೋಗುವ ಶಬ್ದ. ಕುಳಿತಲ್ಲಿ ಸೀಟಿಗೆ ಮುಂದಕ್ಕೆ ಉರುಳದಂತೆ ಪಟ್ಟಿ ಕಟ್ಟಿಕೊಳ್ಳಬೇಕು. ಮೇಲೆ ಏರುತ್ತ ಏರುತ್ತ ಗುಡ್ಡ, ಬೆಟ್ಟ, ನದಿ, ಊರು, ಎಲ್ಲ ಭೂಪಟದಲ್ಲಿ ನೋಡಿದಂತೆ ಚಿಕ್ಕದಾಗುವಂತೆ ಕಾಣುತ್ತದೆ. ಬೊಂಬಾಯಿಯಿಂದ ಅಹಮದಾಬಾದ್‌ವರೆಗೂ ಮೇಘಮಂಡಲದ ಮೇಲೆ ಹಾರುತ್ತ ಇದ್ದೆವು. ಮೇಲೆ ಹೋಗುತ್ತ ಹೋಗುತ್ತ ಗಾಳಿ ಬಹಳ ತಣ್ಣಗಿರುತ್ತದೆ. ಸೆಕೆ ಎಲ್ಲ ಭೂಮಿಯ ಮೇಲೆ ಮತ್ತು ಹತ್ತಿರದಲ್ಲಿ. ಮುಂಬೈ ಅಹಮದಾಬಾದ್ ಮಧ್ಯೆ ಮೋಡ ಮುಚ್ಚಿದ್ದರಿಂದ ಏನೂ ಕಾಣಲಿಲ್ಲ. ಮುಂಗಾರಿನಲ್ಲಿ ಕೆಳಗೆ ನಿಂತು ನೋಡಿದರೆ ಮೋಡ ಮುಚ್ಚಿದ ಆಕಾಶ ಹೇಗೆ ಇರುತ್ತೊ ವಿಮಾನದಿಂದ ಕೆಳಗೆ ಆ ದೃಶ್ಯ ಕಾಣುತ್ತಿತ್ತು. ಮೋಡ ಸ್ವಲ್ಪ ಕಡಿಮೆಯಾಗಿ ಸೂರ್ಯ ರಶ್ಮಿ ಸ್ವಲ್ಪ ಬಿದ್ದಾಗ ಅರಳೆರಾಶಿಯನ್ನು ತೇಲಿಸಿ ಬಿಟ್ಟಂತೆ ಕಾಣುತ್ತಿತ್ತು. ಆದರೆ ಸೂರ್ಯನ ಕಿರಣಗಳು ಮೋಡದಿಂದ ಪ್ರತಿಬಿಂಬವವಾಗಿ ಕಣ್ಣನ್ನು ಕುಕ್ಕುತ್ತಿದ್ದವು. ವಿಮಾನದಲ್ಲಿ ಮಿಸ್ ರೇನ್ ಬ್ರಿಡ್ಜಳ ಉಪಚಾರ ಪೆಪ್ಪರ್ಮೆಂಟ್, ಆಲೂಗಡ್ಡೆ ಉಪ್ಪೇರಿ, ಬಿಸ್ಕತ್, ಟೊಮಾಟೊ, ಕಿತ್ತಲೆಹಣ್ಣು, ಓದುವ ಪೇಪರ್, ಮಾಸಪತ್ರಿಕೆ ಕಾಫಿ, ಟೀ. ಹರಿಹರ ಬಿಟ್ಟಮೇಲೆ ನಾನು ಕಾಫಿ ಕುಡಿದದ್ದು ಏರೋಪ್ಲೇನಿನಲ್ಲೇನೆ. ಅಹಮದಾಬಾದಿಗೆ ಬಂದಾಗ ೩ ಗಂಟೆ.

ಅಹಮದಾಬಾದ್ ಸಾಬರಮತಿ ದಡದಲ್ಲಿದೆ. ವಿಮಾನ ನಿಲ್ದಾಣದ ಪಶ್ಚಿಮಕ್ಕೆ ನಗರವಿದೆ. ೨ ಮೈಲಿ ದೂರದಲ್ಲಿ ಸಾಬರಮತಿ ದಡದಲ್ಲಿ ಗಾಂಧೀಜಿಯವರಿದ್ದ ಸಾಬರಮತಿ ಆಶ್ರಮವಿದೆಯಂತೆ. ಅಹಮದಾಬಾದಿನಲ್ಲೂ ನಮಗೆ ಬಿಸ್ಕತ್, ಕಾಫಿ, ಟೀ—ಕಂಪನಿಯವರೇ ಒದಗಿಸಿದ್ದರು. ಹೊರಡುವಾಗ ಊರಿನ ಮೇಲೆ ಹಾರಾಡಿ ವಿಮಾನ ಹೊರಡುತ್ತದೆ. ಸುಮಾರು ೨೦೦-೩೦೦ ಬಟ್ಟೆ ಗಿರಣಿಗಳಿರಬಹುದು. ಬಹಳ ದೊಡ್ಡ ನಗರ. ಈ ನಗರಕ್ಕೆ ಸರದಾರ್ ವಲ್ಲಭಭಾಯ್

ಪಟೇಲರು ನಗರಸಭಾ ಅಧ್ಯಕ್ಷರಾಗಿ ಇದ್ದರು. ಅಲ್ಲಿಂದ ಉದಯ ಪುರದ ಸಮೀಪ ಬಂದಾಗ ೪-೩೦ ಗಂಟೆ. ಅಹಮದಾಬಾದಿನಿಂದ ಉದಯಪುರದವರೆಗೂ ಬೆಟ್ಟಗುಡ್ಡಗಳ ಸಾಲು, ಪ್ರಾಯಶಃ ಅರಾವಳಿ ಪರ್ವತಗಳೋ ಏನೋ. ಉದಯಪುರದ ಸಮೀಪ ಬಂದಾಗ ವಿಮಾನವು ೧೧೦೦೦ ಅಡಿ ಎತ್ತರದಲ್ಲಿ ಗಂಟೆಗೆ ೧೭೫ ಮೈಲಿಗಳ ವೇಗದಿಂದ ಓಡುತ್ತಿತ್ತು. ಆಗ ಉಷ್ಣಾಂಶ ೧೨°c. ಉದಯಪುರದಿಂದ ಜಯಪುರದ ವರೆಗೆ ಬರೀ ಮರಳು ಭೂಮಿ, ಬೋಳು ಗುಡ್ಡಗಳು. ದೂರ ದೂರದಲ್ಲಿ ಒಂದೊಂದು ಹಳ್ಳಿ. ರಸ್ತೆಗಳು, ಸೇತುವೆಗಳು ಏನೂ ಇದ್ದಂತೆ ಕಾಣಲಿಲ್ಲ. ಗಿಡಮರಗಳು, ಜಲಾಶಯಗಳು ಇದ್ದಂತೆ ಕಾಣಲಿಲ್ಲ. ಜಯಪುರದ ಬಳಿ ೧೮೦ ಮೈಲಿ ವೇಗದಿಂದ ಓಡುತ್ತಿತ್ತು. ದೆಹಲಿಗೆ ಬಂದಾಗ ೬-೩೫. ವಿಮಾನದಿಂದ ದೆಹಲಿ ಬಹಳ ಸುಂದರ ನಗರ. ಹತ್ತಿರದಲ್ಲೇ ಯಮುನಾ ನದಿ, ದೂರದಲ್ಲಿ ಕುತುಬ್ ಮಿನಾರ್ ಸಿಕ್ಕುತ್ತದೆ. ಸಾಲುಸಾಲಾಗಿ, ಬಿಡಿಬಿಬಿಡಿಯಾಗಿ ಕಟ್ಟಿದ ಮನೆಗಳು, ವಿಶಾಲವಾದ ರಸ್ತೆಗಳು, ಹೂ ತೋಟಗಳು. ವಿಮಾನ ನಿಲ್ದಾಣದಿಂದ 'ಕಾನ್‌ಸ್ಟಿಟ್ಯೂಷನ್ ಹೌಸ್' ನಾಲ್ಕು ಮೈಲಿಯಾಗುತ್ತೆ. ಮೋಟಾರ್ ಬಾಡಿಗೆ ಆರು ರೂಪಾಯಿ. ಇಲ್ಲಿ ಈಗ ಮಳೆಯ ಸುಳಿವೇ ಇಲ್ಲ. ನಾನು ತಂದ ಬಟ್ಟೆಯೆಲ್ಲ ಅನವಶ್ಯಕ. ಬಟ್ಟೆಯೇ ಬೇಕಿಲ್ಲ. ಅಸಾಧ್ಯ ಸೆಕೆ. ಎಲೆಕ್ಟ್ರಿಕ್ ಫ್ಯಾನ್ ಕೆಳಗೆ ಕುಳಿತು ಈ ಕಾಗದ ಬರೆಯುತ್ತಿದ್ದೇನೆ. ನನಗೆ ಒಂದು ಪ್ರತ್ಯೇಕ ಕೊಠಡಿ, ಮಂಚ, ಮೂರು ಕುರ್ಚಿ, ಎರಡು ಮೇಜು, ಒಂದು ಟೀಪಾಯ್, ಕೋಣೆಗೆ ಸೇರಿಯೇ ಸ್ನಾನದ ಮನೆ, ಕಕ್ಕಸು, ಮುಖ ತೊಳೆಯಲು ತೊಟ್ಟಿ—ಇದರಂತೆ ಇನ್ನು ಬರುವ ಎಲ್ಲರಿಗೆ. ಈಗಾಗಲೇ ೨೫-೩೦ ಜನ ಬಂದಿದ್ದಾರೆ. ನೆನ್ನೆ ಬಳ್ಳಾರಿಯ ಗೋವಿಂದದಾಸ್, ಸೇಲಂ ಸುಬ್ರಹ್ಮಣಂ ಎಂಬುವರು ಸಿಕ್ಕಿದ್ದರು. ವಿಮಾನದಲ್ಲಿ ಜಂಜೀರ ಸಂಸ್ಥಾನದ ನವಾಬನ ಕಾರ್ಯದರ್ಶಿ ಚಿಟ್ನೀಸ್ ಎನ್ನುವವರ ಪರಿಚಯವಾಯಿತು. ಇಲ್ಲಿಯ ನಲ್ಲಿಯಲ್ಲಿ ಬರುವ ನೀರೇ ಬಿಸಿಯಾಗಿದೆ. ಕಾಸುವ ಗೋಜೇ ಇಲ್ಲ. ಊಟ ಏನೂ ರುಚಿಯಿಲ್ಲ. ಎಲ್ಲವೂ ಸಪ್ಪೆ. ಹುಳಿ, ಕಾರ ಎರಡೂ ಇಲ್ಲ. ನಾಡಿದ್ದಿ

ನಿಂದ ಮದರಾಸು ಊಟಕ್ಕೆ ಏರ್ಪಾಡು ಮಾಡುತ್ತಾರಂತೆ. ಆಮೇಲೆ ನೋಡಬೇಕು ಹೇಗೆ ಇರುತ್ತೆ ಎಂದು. ಮೈಸೂರಿನವರಲ್ಲಿ ಬಂದವನು ನಾನೇ ಮೊದಲಿಗ. ಆದರೂ ಪರಸ್ಥಳಕ್ಕೆ ಬಂದಂತೆ ಕಾಣುವುದಿಲ್ಲ. ಎಲ್ಲರೂ ಅಷ್ಟು ಆದರದಿಂದ ನೋಡುತ್ತಿದ್ದಾರೆ. ಇಲ್ಲಿ ಬಂದವರನ್ನು ವಿಚಾರಿಸಲು ನರಂಗ್ ಎಂದು ಪಂಜಾಬ ಅಧಿಕಾರಿ ಒಬ್ಬನಿದ್ದಾನೆ. ಜವಾನರು ಇದ್ದಾರೆ. ನಾನಿರುವ ರೂಮು ನಮ್ಮ ಮನೆಯ ಹಾಲಿನಷ್ಟು ಇದೆ. ನೆಲಕ್ಕೆ ಜಮಖಾನೆ.

ಘಟನಾಸಭೆ ನಾಡಿದ್ದು ೧೧ ಗಂಟೆಗೆ ಆರಂಭ. ಉಳಿದ ಪರಿಚಯ ಇನ್ನು ಮೇಲೆ ಆಗಬೇಕು. ಇಂದು ಶನಿವಾರ ಬೆಳಿಗ್ಗೆ ೪-೩೦ಗೆ ಈ ಪತ್ರ ಬರೆದಿದ್ದೇನೆ. ಪುನಃ ನಾಳೆ ಇನ್ನೊಂದು.

ಅಂತೂ ದೆಹಲಿಗೆ ಬಂದಿದ್ದೇನೆ. ಘಟನಾಸಮಿತಿಯಲ್ಲಿ ನನ್ನ ಪಾತ್ರ ಏನು ? ಎನ್ನುವ ಪ್ರಶ್ನೆ ಆಗಲೇ ಭಾಧಿಸತೊಡಗಿದೆ. ಹಿಂದಿನ ಸಂಸ್ಕೃತಿ, ಇತಿಹಾಸ ಎಲ್ಲ ಕಣ್ಣೆದುರು ಸುಳಿಯುತ್ತಿವೆ. ಮಹಾಭಾರತ ಯುದ್ಧವಾದುದು ಇಲ್ಲಿಯೇ ! ಇದೇ ದೆಹಲಿ ಆಗ ಹಸ್ತಿನಾವತಿ ಯಾಗಿತ್ತು. ಇಂದ್ರಪ್ರಸ್ಥ ಇಲ್ಲಿಗೆ ೨ ಮೈಲಿ. ಮೊಗಲ್ ಸಾಮ್ರಾಜ್ಯ ಹುಟ್ಟಿ ಬೆಳೆದು, ನಾಶವಾದದ್ದು ಇಲ್ಲಿಯೇ. ಈಗ ಬ್ರಿಟೀಷ್ ಸಾಮ್ರಾಜ್ಯ ಅಸ್ತಮಿಸುತ್ತಿರುವುದೂ ಇಲ್ಲಿಯೇ. ಉದಯಿಸುತ್ತಿರುವ ಸ್ವತಂತ್ರ ಭಾರತದ ಸೂರ್ಯನಾರಾಯಣನ ಆರಾಧನೆಗಾಗಿ ಬಂದಿರುವ ಭಕ್ತರಲ್ಲಿ ನಾನು ಕಿರಿಯರಲ್ಲಿ ಕಿರಿಯ. ಆ ಸ್ವಾತಂತ್ರ್ಯವು ಚಿರಸ್ಥಾಯಿ ಯಾಗಿ ಉಳಿದು, ಬೆಳೆದು, ಬಲಗೊಂಡು ಅದರಿಂದ ನಾಡಿನ ಜನತೆಯ ಅಭ್ಯುದಯವಾಗುವಂತೆ, ನಾಡಿನ ಶ್ರೇಯಸ್ಸು, ಶಕ್ತಿ ಹೆಚ್ಚು ವಂತೆ ಕೆಲಸಮಾಡಬೇಕಾಗಿದೆ. ನಾಡಿನ ಹಿರಿಯರ ದರ್ಶನಲಾಭ ನನಗೆ ನಾಡಿದ್ದು ಆಗುತ್ತದೆ. ಆ ಶುಭಸಮಯದ ನಿರೀಕ್ಷೆಯೇ ಒಂದು ಆನಂದವನ್ನು ಕೊಟ್ಟಿದೆ.

ಈ ಸಲ ಸಭೆ ಸುಮಾರು ಒಂದು ತಿಂಗಳು ಆಗಬಹುದೆಂದು ಹೇಳುತ್ತಾರೆ. ವಿಚಾರಿಸಿ ಬರೆಯುತ್ತೇನೆ.

೧೫-೭-೪೭

ನಿನ್ನೆ ಕಾಗದ ಬರೆಯಲು ಆಗಲಿಲ್ಲ. ಆದ್ದರಿಂದ ಈ ದಿನ ಎದ್ದು ಬೆಳಿಗ್ಗೆ ಬರೆಯುತ್ತಿದ್ದೇನೆ. ಈಗ ೬ ಗಂಟೆ. ಇಲ್ಲಿ ಸುಮಾರು ೫ ಗಂಟೆಗೇನೆ ಬೆಳಗಾಗುತ್ತೆ. ನಮ್ಮಲ್ಲಿ ೭ ಗಂಟೆ ಹೊತ್ತಿಗೆ ಇರು ವಂತೆ ಇರುತ್ತೆ. ಸಂಜೆಯೂ ಅಷ್ಟೇ. ೮ ಗಂಟೆವರೆಗೆ ಬೆಳಕು ಇರುತ್ತೆ. ಕಾರಣ ನಾವು ಮಧ್ಯಭಾಜಕ ವೃತ್ತದಿಂದ ಬಹಳ ಉತ್ತರದಲ್ಲಿ ಇರುತ್ತೇವೆ. ೧೨-೭-೪೭ನೆ ದಿನ ನಿನಗೆ ಕಾಗದ ಬರೆದ ನಂತರ ಇನ್ನೂ ಕೆಲವರನ್ನು ಪರಿಚಯ ಮಾಡಿಕೊಂಡೆ. ಶಿವಮೊಗ್ಗದಲ್ಲಿ ವೆಂಕಟದೇಶಿಕಾಚಾರ್ ಎಂತ ಕಾಲೇಜ್ ಲೆಕ್ಚರರ್ ಇದ್ದರು. ಅವರು ಈಗ ನಮ್ಮ C.A.ನಲ್ಲಿ ರಿಸರ್ಚ್ ಆಫೀಸರ್. ೪೫೦ ರೂ. ಸಂಬಳ. ಅವರು ಮನೆಗೆ ಕರೆದುಕೊಂಡು ಹೋಗಿದ್ದರು. ಹೆಂಡತಿ, ಒಂದು ಮಗು ಇದ್ದಾರೆ. ನನ್ನ ಆಫೀಸಿನಂಥ ಮೂರು ಸಣ್ಣ ರೂಮು, ಕಕ್ಕಸು, ಸ್ನಾನದ ಮನೆ. ಇಷ್ಟಕ್ಕೆ ೪೫ ರೂ. ಬಾಡಿಗೆ. ಇಲ್ಲಿ ಎರಡು ಆಣೆಗೆ ಒಂದು ನಿಂಬೆಹಣ್ಣು. ಪಾನಕ ಮಾಡಿಕೊಟ್ಟಿ ದ್ದರು. ಅವರ ಹೆಂಡತಿ ಶಿವಮೊಗ್ಗದಲ್ಲಿ ಇಂಟರ್ ಪಾಸ್ ಮಾಡಿದರು. ನಮ್ಮ C.A.ನ ಸೆಕ್ರೆಟರಿ ಹೆಚ್. ವಿ. ವರದರಾಜ ಅಯಂಗಾರ್ ಮೈಸೂರಿನವರು. ಸೆಂಟ್ರಲ್ ಕಾಲೇಜಿಗೆ ನಾನು ಹೋಗುವ ಮುಂಚೆ ಒಂದೆರಡು ವರ್ಷದಲ್ಲಿ B.Sc., ಮಾಡಿದ್ದರು. ಈಗ ಪ್ರಾಯಶಃ ೩೦೦೦ ರೂ. ಸಂಬಳ ಇರಬಹುದು. ಇನ್ನೊಬ್ಬ ಸಹಾಯಕ ಕಾರ್ಯದರ್ಶಿ ಗಳು—ದಿವಾನ್ ಬಹದ್ದೂರ್ ಕೆ. ಆರ್. ಶೇಷಾಚಾರ್ಯರ ಮಕ್ಕಳು ರಾಮಧ್ಯಾನಿ ಎಂದು. ಅವರೇ ಬಂದು ನನ್ನ ಪರಿಚಯ ಮಾಡಿಕೊಂಡರು. ೧೨ನೇ ಸಾಯಂಕಾಲ ನಿಜಲಿಂಗಪ್ಪ, ಚಂಗಲ ರಾಯ ರೆಡ್ಡಿಯವರು, ರಾಮಸ್ವಾಮಿ ಮೊದಲಿಯಾರರು ಪ್ರತ್ಯೇಕ ವಿಮಾನಗಳಲ್ಲಿ ಬಂದರು. ಮೈಸೂರಿನ ಇತರ ಸದಸ್ಯರು ರೈಲಿನಲ್ಲಿ ಬಂದರು. ನಾನು, ಡಿ. ಹೆಚ್. ಚಂದ್ರಶೇಖರಯ್ಯ, ಮಹಮ್ಮದ್ ಷರಿಫ್, ಗುರುವಾರೆಡ್ಡಿ, ಚನ್ನಯ್ಯ ಕಾನ್ಸ್ಟಿಟ್ಯೂಷನ್ ಹೌಸ್‌ನಲ್ಲಿ

ಇದ್ದೇವೆ. ಚೆಂಗಲರಾಯರೆಡ್ಡಿ, ನಿಜಲಿಂಗಪ್ಪನವರು ಬಂಗಲೆಯಲ್ಲಿ ಫಿರೋಜ್‌ಷಾ ರಸ್ತೆಯಲ್ಲಿದ್ದಾರೆ. ದಿವಾನರು ಸ್ವಿಸ್ ಹೋಟೆಲ್‌ನಲ್ಲಿದ್ದಾರೆ. ನಮಗೆ ಸಹಾಯಕ್ಕೆಂದು ಪುಟ್ಟಸ್ವಾಮಿ, ಸುಬ್ರಹ್ಮಣ್ಯ ಐಯ್ಯರ್, ನಿವೃತ್ತ ಹೈಕೋರ್ಟಿನ ಜಡ್ಜ್ ಬಂದಿದ್ದಾರೆ. ಅವರಿಬ್ಬರು ಮೆರಿನಾ ಹೋಟಲಿನಲ್ಲಿದ್ದಾರೆ. ಆರ್. ಆರ್. ದಿವಾಕರರು ಬಂದಿದ್ದಾರೆ. ಅವರು ಫಿರೋಜ್‌ಷಾ ರಸ್ತೆಯಲ್ಲಿ ೧೩Dನಲ್ಲಿದ್ದಾರೆ. ಬಳ್ಳಾರಿಯಿಂದ ಮದರಾಸ್ ಮಂತ್ರಿ ಸೀತಾರಾಮರೆಡ್ಡಿಯವರಿದ್ದಾರೆ. ಮಂಗಳೂರಿನಿಂದ ಮಲ್ಯ, ರಾಮದುರ್ಗದ ಮುನವಳ್ಳಿ ವಕೀಲ್ ಇದ್ದಾರೆ. ಇದಲ್ಲದೆ ಹಿಂದೆ ಮಂತ್ರಿಗಳಾಗಿದ್ದ ಶ್ರೀ ಶ್ರೀನಿವಾಸನ್, ಗ್ವಾಲಿಯರ್ ಸಂಸ್ಥಾನದಿಂದ ದಿವಾನ ಮಾಧವರಾಯರು, ಪೂರ್ವ ಇಂಡಿಯಾದ ಸಂಸ್ಥಾನಗಳಿಂದ ಬಂದಿದ್ದಾರೆ. ನಾವು ಮೈಸೂರಿನವರೇ ೧೦-೧೨ ಜನ ಇದ್ದೇವೆ. ದಿನವೂ C.A.ನಲ್ಲಿ ಭೇಟಿಯಾಗುತ್ತೇವೆ. ಆದರೆ ಇರುವುದು ಮಾತ್ರ ೮-೧೦ ಮೈಲಿ ದೂರದಲ್ಲಿ. ನನ್ನ ರೂಮಿಗೆ, ಎಲ್ಲ ರೂಮುಗಳಿಗೆ ಟೆಲಿಫೋನ್ ಕೊಟ್ಟಿದ್ದಾರೆ. ಇಲ್ಲಿ ಬೆಳಿಗ್ಗೆ ೬ ಗಂಟೆಗೆ ಟೀ, ರೊಟ್ಟಿ, ಬಾಳೆಹಣ್ಣು ೮—೯-೩೦ವರೆಗೆ ಪುನಃ ರೊಟ್ಟಿ (bread), ಕಾಫಿ, ಇನ್ನೇನಾದರೂ ಸ್ವಲ್ಪ ತಿಂಡಿ, ೧—೨-೩೦ವರೆಗೆ ಊಟ; 4 ಗಂಟೆಗೆ ಟೀ, ಬಿಸ್ಕತ್; ರಾತ್ರಿ ೮—೧೦-೩೦ವರೆಗೆ ಊಟ, ಇದು ಕಾರ್ಯಕ್ರಮ. ಎಲ್ಲ ಯೂರೋಪಿಯನ್ ಪದ್ಧತಿ. ಮೇಜಿನ ಮೇಲೆ ಊಟ. ಮಡಿ, ಮೈಲಿಗೆ ಎಲ್ಲ ವಿಂಧ್ಯಪರ್ವತದ ದಕ್ಷಿಣಕ್ಕೇನೆ ಆಯಿತು. ಇಲ್ಲಿ ಹಿಂದೂ ಮುಸಲ್ಮಾನ್ ಎರಡೇ ಜಾತಿ. ಶಾಖಾಹಾರಿಗಳಿಗೆ, ಸಸ್ಯಾಹಾರಿಗಳಿಗೆ ಬೇರೆ ಬೇರೆ ಊಟ.

೧೨ನೆ ಬೆಳಿಗ್ಗೆ ರಾಮಸ್ವಾಮಿ ಮೊದಲಿಯಾರರು ನಮ್ಮ ರೂಮಿಗೆ ಬಂದು ನಮ್ಮನ್ನಿಲ್ಲಿ ಕಂಡಿದ್ದರು. ಮೈಸೂರಿನಲ್ಲಿ ನಮ್ಮ ನಿಮ್ಮ ಭೇದಗಳು ಏನೇ ಇರಲಿ ಇಲ್ಲಿ ಒಟ್ಟಿಗೆ ಕೆಲಸ ಮಾಡೋಣ ಎಂದರು. ಚುನಾವಣೆ ನೀವು ಸರಿಯಾಗಿ ನಡೆಸಲಿಲ್ಲ. ಜವಾಬ್ದಾರಿ ಸರಕಾರ ಕೊಡಲಿಲ್ಲ. ನಿಮ್ಮ ನಡಳಿಕೆಯಿಂದ ನಮಗೆ ಸಮಾಧಾನವಿಲ್ಲ. ನಮ್ಮ ನಮ್ಮ

ಅಭಿಪ್ರಾಯ ನಾವು ಸ್ವತಂತ್ರವಾಗಿ ಹೊರಗೆಡಹುತ್ತೇವೆ. ಮೈಸೂರಿನ ದೃಷ್ಟಿಯಿಂದ ಯಾವುದು ನಮ್ಮ ದೇಶಕ್ಕೆ ಕ್ಷೇಮಕರವೆಂದು ನಮಗೆ ಹೊಳೆಯುತ್ತದೆಯೋ ಅದನ್ನು ನಿರ್ಭಯವಾಗಿ ಪ್ರತಿಪಾದಿಸುತ್ತೇವೆ. ಚರ್ಚೆ ಮಾಡೋಣ. ನಮ್ಮ ಅಭಿಪ್ರಾಯ ನಿಮಗೆ ಸಮ್ಮತವಾದರೆ ನೀವು ಒಪ್ಪಬೇಕು. ನಿಮ್ಮ ಅಭಿಪ್ರಾಯ ನಮಗೆ ಸರಿ ಕಂಡರೆ ನಾವು ಒಪ್ಪುತ್ತೇವೆ. ಹಟ ಏನೂ ಇಲ್ಲ. ಆದರೆ ನೀವೂ ನಾವೂ ಒಪ್ಪದಿದ್ದರೆ ನಮ್ಮ ದಾರಿ ನಮಗೆ ನಿಮ್ಮ ದಾರಿ ನಿಮಗೆ, ನಿಮ್ಮ ಹೇಳಿಕೆಯಂತೆ ನಡೆಯಲು ಸಾಧ್ಯವಿಲ್ಲ ಎಂದು ಚಂಗಲರಾಯ ರೆಡ್ಡಿಯವರೂ ನಾನೂ ಹೇಳಿದೆವು. ಅವರೂ ಒಪ್ಪಬೇಕಾಯಿತು. ಹನುಮಂತಯ್ಯನವರನ್ನು ಎಲೆಕ್ಷನ್‌ಗೆ ನಿಲ್ಲಲು ಅವಕಾಶಕೊಡದೆ ಇದ್ದುದಕ್ಕೆ ಎಲೆಕ್ಷನ್ ಕೇಸ್ ಹಾಕುತ್ತೇವೆ ಎಂದೂ ತಿಳಿಸಿದೆವು. ಆಗಸ್ಟು ೧೫ರ ಒಳಗೆ ಇಂಡಿಯ ಡೊಮಿನಿಯನ್‌ಗೆ ಮೈಸೂರು ಸೇರುವುದು ಹಿತ, ಉತ್ತಮ ಎಂದು ತಿಳಿಸಿದೆವು. ಇದು ಅವರಿಗೆ ಸಮ್ಮತವಿದ್ದಂತೆ ಕಾಣುವುದಿಲ್ಲ.

ದಿನ ಸಂಜೆ ಇಲ್ಲಿ ಕಾಂಗ್ರೆಸ್ ಪಾರ್ಟಿ ಸಭೆ ಸೇರುತ್ತೆ. ೧೨ನೆ ಸಂಜೆ ಆಚಾರ್ಯ ಕೃಪಲಾನಿ (ಕಾಂಗ್ರೆಸ್ಸ ಅಧ್ಯಕ್ಷರು) ಅಧ್ಯಕ್ಷತೆ ವಹಿಸಿದ್ದರು. ಜವಹರಲಾಲರು, ಸರದಾರ ಪಟೇಲರು, ಗೋವಿಂದವಲ್ಲಭ ಪಂತ, ಡಾ. ಪಟ್ಟಾಭಿ, ರಾಜಗೋಪಾಲಾಚಾರ್ಯ, ಕೆ. ಎಂ. ಮುನ್ಷಿ, ಸರೋಜಿನಿದೇವಿ ಎಲ್ಲರೂ ನಿತ್ಯ ಬಂದು ಭಾಗವಹಿಸುತ್ತಾರೆ. ಖಡಾಖಡಿ ಚರ್ಚೆಯಾಗುತ್ತೆ. ಜವಹರಲಾಲರಿಗೆ ಸ್ವಲ್ಪ ಮುಂಗೋಪ—ಎಲ್ಲ ಬೇಗ ಆಗಬೇಕು ಎಂದು. ನಿನ್ನೆ (೧೪-೭-೪೭) ಸಂಜೆ ಪಟ್ಟಾಭಿಯವರಿಗೂ ಜವಹರಲಾಲರಿಗೂ ನಾನು ಮಾತನಾಡಬೇಕು, ನಾನು ಮಾತನಾಡಬೇಕು ಎಂದು ವ್ಯಾಜ್ಯ ಹುಟ್ಟಿ, ಕೃಪಲಾನಿ ಇಬ್ಬರನ್ನೂ ಕೂಡಿಸಿದರು. ಜವಹರಲಾಲರು ಕೋಪದಲ್ಲಿ ಎದ್ದು ಹೋದರು, ಪುನಃ ಬಂದರು. ರಾಜಗೋಪಾಲಾಚಾರ್ಯರನ್ನು, ದಿವಾನ್ ಬಹದ್ದೂರ್ ಗೋಪಾಲಸ್ವಾಮಿ ಅಯಂಗಾರ್ಯರನ್ನು ಕಂಡು ಮಾತನಾಡಿದ್ದೆವು. ಗೋಪಾಲಸ್ವಾಮಿ ಅಯಂಗಾರ್ಯರು ಕಾಶ್ಮೀರದಲ್ಲಿ ದಿವಾನರಾಗಿದ್ದವರು,

ಮದರಾಸಿನವರು, ಸಂಸ್ಥಾನಗಳ ವಿಷಯದಲ್ಲಿ, ರಾಜಕೀಯ ನೈಪುಣ್ಯ ದಲ್ಲಿ ಬಹಳ ನುರಿತವರು, ಬುದ್ಧಿವಂತರು. ಅದರಂತೆ ಸರ್ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರು ಮತ್ತು ಮುನ್ಷಿಯವರು ಆ ಸಭೆಯಲ್ಲಿ ಭಾಗ ವಹಿಸುವುದೇ ಒಂದು ಸೌಭಾಗ್ಯ. ನಮಗೂ ಸಮಾನ ಅವಕಾಶವಿದೆ. ಸಂಸ್ಥಾನಗಳವರು, ಬ್ರಿಟೀಷ್ ಇಂಡಿಯಾದವರು ಎಂಬ ಭೇಧವೇ ಇಲ್ಲ. ಆದರೆ ಅನವಶ್ಯಕವಾಗಿ ಮಾತನಾಡಹೋದರೆ ಕೂತುಕೊಳ್ಳಿ ಎಂದು ಹೇಳುತ್ತಾರೆ.

ನಿನ್ನೆ ೧೧ಕ್ಕೆ C.A. ಮೊದಲನೆ ಸಭೆ ಸೇರಿತು. ಬಾಬು ರಾಜೇಂದ್ರ ಪ್ರಸಾದರು ಅಧ್ಯಕ್ಷರು. ಲೈಬ್ರರಿ ಹಾಲಿನಲ್ಲಿ ಸಭೆ ಸೇರುತ್ತೆ. ಭವನವು ವರ್ತುಳಾಕಾರವಾಗಿದೆ. ಅಧ್ಯಕ್ಷರ ಪೀಠದ ಎದುರಿಗೆ ಕುದುರೆಲಾಳದಂತೆ ಒಂದರ ಹಿಂದೆ ಒಂದರಂತೆ ಸಾಲುಸಾಲಾಗಿ ಆಸನಗಳನ್ನು ಹಾಕಿದ್ದಾರೆ. ಅಧ್ಯಕ್ಷರ ಪೀಠವು ದೇವರ ಮಂಟಪ ದಂತೆ ಎತ್ತರದಲ್ಲಿ ಗಂಧದಲ್ಲಿ ಮಾಡಿದೆ. ಸಭಾಭವನಕ್ಕೆ ನಾಲ್ಕು ಬಾಗಿಲುಗಳಿವೆ. ಅಧ್ಯಕ್ಷರ ಹಿಂದೆ ಒಂದು, ಎದುರುಗಡೆ ಒಂದು, ಪಕ್ಕದಲ್ಲಿ ಎರಡು. ಪ್ರತಿ ಬಾಗಿಲ ಪಕ್ಕದಲ್ಲಿ ಎರಡೆರಡು ಎತ್ತರವಾದ ಕರಿ ಕಲ್ಲಿನ ಕಂಬಗಳಿವೆ. ಮೇಲೆ ಭವ್ಯವಾದ ಭವನಾಶಿ ಗೋಪುರ. ಸುತ್ತಲು ಗೋಡೆಯಮೇಲೆ ಹಿಂದಿನ ವೈಸರಾಯರ ಫೋಟೋಗಳಿದ್ದವು. ಅವುಗಳನ್ನೆಲ್ಲ ತೆಗೆಸಿಬಿಟ್ಟಿದ್ದಾರೆ. ಗೋಪುರದ ಕೆಳಗೆ ಪ್ರೇಕ್ಷಕರ ಗ್ಯಾಲರಿಗಳೆಲ್ಲ ಕಿಕ್ಕಿರಿದು ತುಂಬಿದ್ದವು. ಅಧ್ಯಕ್ಷರು ನಮ್ಮ ಹೆಸರು ಗಳನ್ನು ಕರೆದರು. ಮೊದಲು ಮುಸ್ಲಿಂ ಲೀಗನವರು, ಅನಂತರ ಪಶ್ಚಿಮ ಬಂಗಾಳ, ಪೂರ್ವ ಪಂಜಾಬಿನವರು, ಅನಂತರ ಸಂಸ್ಥಾನ ಗಳವರು. ಅವರಲ್ಲಿ ನಾವೇ ಮೈಸೂರಿನವರು ಮೊದಲಿಗರು. ಕರೆದೊಡನೆ ಕಾರ್ಯದರ್ಶಿಗಳಲ್ಲಿ ಹೋಗಿ ನಮ್ಮ ಅಧಿಕಾರಪತ್ರ ಕೊಟ್ಟು, ಸದಸ್ಯರ ಪುಸ್ತಕ(ದಪ್ಪ ಕಾಗದದಲ್ಲಿ ಸುವರ್ಣಾಕ್ಷರಗಳಿಂದ ಪ್ರಿಂಟಾಗಿದೆ)ದಲ್ಲಿ ಸಹಿಮಾಡಿ, ಅಧ್ಯಕ್ಷರ ಬಳಿ ಹೋಗಿ, ಹಸ್ತಲಾಘವ ಕೊಟ್ಟು, ನಮಸ್ಕಾರಮಾಡಿ ಸ್ವಸ್ಥಳಕ್ಕೆ ಹಿಂದಿರುಗಬೇಕು. ನಿನ್ನೆ ಆ

ದೃಶ್ಯವೇ ಒಂದು ಅಪೂರ್ವ ದೃಶ್ಯ. ದೇಶದ ಪ್ರಮುಖ ನಾಯಕರೆಲ್ಲ ಸೇರಿ ಭಾರತವರ್ಷದ ಸ್ವಾತಂತ್ರ್ಯದ ಭವಿಷ್ಯವನ್ನು ಬರೆಯುವ ದೃಶ್ಯ! ಮೊದಲನೆ ಸಾಲಿನಲ್ಲಿ ಅಬುಲ್‌ಕಲಂ ಆಜಾದ್, ನೆಹ್ರೂ, ಪಟೇಲ್, ಕೃಪಲಾನಿ, ಪಂತ್, ರಾಜಗೋಪಾಲಾಚಾರ್, ಪಟ್ಟಾಭಿ ಮುಂತಾದ ನಾಯಕರು. ಅದು A ಸಾಲು. ಚಂಗಲರಾಯ ರೆಡ್ಡಿಯವರದು F ಸಾಲಿನಲ್ಲಿ ೧೨. ನನ್ನದು ಅವರ ಹಿಂದೆಯೇ G ಸಾಲಿನಲ್ಲಿ ೧೨ ನನ್ನ ಪಕ್ಕದ ಸಾಲಿನಲ್ಲಿಯೇ ಬಂಗಾಳದಿಂದ ಬಂದ ಉಪೇಂದ್ರನಾಥ ಎಂಬುವವರಿದ್ದಾರೆ. ನಿನ್ನೆ ಮೊದಲನೆ ದಿನ ಕೆಲವು ಚರ್ಚೆಯಿಲ್ಲದ ವಿಷಯಗಳಾದಮೇಲೆ ಸಭೆ ಮುಕ್ತಾಯವಾಯಿತು. ಇಂದು ಮಾತ್ರ ೩ ರಿಂದ ೬ರವರೆಗೆ ಸಭೆ ನಡೆಯುತ್ತೆ. ಅಧ್ಯಕ್ಷರ ಹಿಂದೆ ಮಿಲಿಟರಿ ಆಫೀಸರ್ ಒಬ್ಬ ಅಂಗರಕ್ಷಕನಾಗಿ ಕುಳಿತಿರುತ್ತಾನೆ. ಮುಂದೆಯೇ ಸ್ವಲ್ಪ ಕೆಳಗೆ ಕಾರ್ಯದರ್ಶಿಗಳಿರುತ್ತಾರೆ. ಈಗ ಸಭೆಯಲ್ಲಿ ಸುಮಾರು ೨೨೦ ಜನರು ಇರುತ್ತೇವೆ. ಮಾತೆಲ್ಲ ಮುಕ್ಕಾಲು ಪಾಲು ಹಿಂದಿ—ಹಿಂದೂಸ್ಥಾನಿ. ಅದು ತಿಳಿಯದವರು ಮಾತ್ರ ಇಂಗ್ಲೀಷ್ ಭಾಷೆಯಲ್ಲಿ. ಸ್ವಲ್ಪ ಹಿಂದಿ ಕಲಿತದ್ದು ಈಗ ಸಹಾಯವಾಗುತ್ತಿದೆ, ಸ್ವಲ್ಪ ಸ್ವಲ್ಪ ಅರ್ಥವಾಗುತ್ತೆ.

೧೧-೭-೪೭ನೇ ಸಂಜೆ ಕೊನ್ನಾಲ್ ಸರ್ಕಲ್ಲಿಗೆ ಹೋಗಿದ್ದೆ. ಅದು ವ್ಯಾಪಾರ ವರ್ತುಲ. ಸುತ್ತು ಎಲ್ಲಿ ಹೋದರೂ ಅಂಗಡಿಗಳೇ. ಆದರೆ ಬೆಲೆ ಮಾತ್ರ ಒಂದಕ್ಕೆ ಎರಡು. ನಮಗೆ ಅಗಸ ಬರುತ್ತಾನೆ. ದೊಡ್ಡ ಬಟ್ಟೆ ಒಗೆದದ್ದಕ್ಕೆ ಒಂದಕ್ಕೆ ೦-೩-೦, ಸಣ್ಣದಕ್ಕೆ ೦-೨-೦. ದುಡ್ಡಿಗೆ ಇಲ್ಲಿ ಬೆಲೆ ಇಲ್ಲ. ವೆಂಕಟದೇಶಿಕಾಚಾರ್ಯರ ತರಕಾರಿ ಖರ್ಚು ತಿಂಗಳಿಗೆ ೩೦ ರೂ. ಆಗುತ್ತೆ ಎಂದರು.

೧೭-೭-೪೭

ಈಗ ಬೆಳಿಗ್ಗೆ ೫ ಗಂಟೆ. ನಿನ್ನೆ ಮಧ್ಯಾಹ್ನ ಮೂರು ಗಂಟೆಯಿಂದ ಸಂಜೆ ೬ ಗಂಟೆವರೆಗೆ ಮಳೆ ಬಂದಿತು. ಈಗ ಹವೆ ಸ್ವಲ್ಪ ತಣ್ಣಗಿದೆ. ರಾತ್ರಿ ಕೋಣೆಯಲ್ಲೇ ಫ್ಯಾನ್ ಹಾಕಿಕೊಂಡು ಮಲಗಿದ್ದೆ.

ಇದುವರೆಗೆ ಉಷ್ಣಾಂಶ ೧೦೩-೧೦೪ ಇರುತ್ತಿತ್ತು. ನಲ್ಲಿಯಿಂದ ಬರುವ ನೀರು ಸುಡುತ್ತ ಬರುತ್ತದೆ. ಇವತ್ತು ಸ್ವಲ್ಪ ತಣ್ಣಗಿದೆ.

(ಕಾನ್‌ಸ್ಟಿಟ್ಯುಯೆಂಟ್) ಘಟನಾಸಭೆ ಸೇರಿ ನಿನ್ನೆಗೆ ಮೂರು ದಿನವಾಯಿತು. ನಿನ್ನೆ ಮಾತನಾಡಲು ಅವಕಾಶ ಕಲ್ಪಿಸಿಕೊಂಡೆ. ಸಾಮಾನ್ಯವಾಗಿ ದಿವಾನರಿಗೂ ನಮಗೂ (ಕಾಂಗ್ರೆಸ್ಸು) ಸ್ವಲ್ಪ ದೂರದೂರವೇ. ನಾವು ಅವರ ಆಜೂಜ್‌ದಾರಿ ಮಾಡುವವರಲ್ಲ. ನನ್ನ ಮಾತು ಮುಗಿಯುತ್ತಲೇ ನಾನು ಇರುವ ಸ್ಥಳಕ್ಕೆ ಬಂದು ಹೊಗಳಿದರು—ಬಹಳ ಚೆನ್ನಾಗಿತ್ತು ಎಂದು. ಈಗ ಸಭೆ ೩ರಿಂದ ಸಂಜೆ ೬ರವರೆಗೆ ನಡೆಯುತ್ತಿದೆ. ಹೊರಗಡೆ ಕಾಫಿ, ಟೀಗೆ ಬಂದಾಗ ಎಲ್ಲರನ್ನೂ ನೋಡಬಹುದು, ಮಾತನಾಡಿಸಬಹುದು, ಪರಿಚಯವಿದ್ದರೆ ಕುಳಿತು ಹರಟೆ ಹೊಡೆಯಬಹುದು. ಕ್ಯಾಪ್ಟನ್ ಲಕ್ಷ್ಮಿ ತಾಯಿ ಅಮ್ಮು ಸ್ವಾಮಿನಾಥನ್ ಅಸೆಂಬ್ಲಿ ಸದಸ್ಯರು. ನಿನ್ನೆ ಡಾಕ್ಟರ್ ಅಂಬೇಡ್ಕರ್ ಪರಿಚಯವಾಯಿತು. ಮೊದಲು ಕಾಂಗ್ರೆಸ್ ಕಂಡರೆ ಕೆಂಡ ಕಾರುತ್ತಿದ್ದರು. ಈಗ ಕಾಂಗ್ರೆಸ್‌ನವರ ಬೆಂಬಲದಿಂದಲೇ ಸದಸ್ಯರಾಗಿದ್ದಾರೆ. ಮೌಲಾನ ಅಬುಲ್‌ಕಲಂ ಅಜಾದ್, ಕೃಪಲಾನಿ ಮುಂತಾಗಿ ಎಲ್ಲರೂ ಟೀಗೆ ಬಂದಾಗ ಒಟ್ಟಿಗೆ ಕುಳಿತು ಹರಟೆ ಹೊಡೆಯುತ್ತಿರುತ್ತಾರೆ. ಹೆಂಗಸರೇ ೧೦-೧೨ ಜನ ಸದಸ್ಯರಿದ್ದಾರೆ. ಸರೋಜಿನಿ ನಾಯ್ಡು, ಸುಚೇತಾ ಕೃಪಲಾನಿ, ಅಮ್ಮು ಸ್ವಾಮಿನಾಥನ್, ಹಂಸಾ ಮೆಹಥಾ, ಮಾಯಾ ಬೆನರ್ಜಿ, ರೇಣುಕಾ ರೇ, ಒಬ್ಬ ಮುಸ್ಲಿಂ ಮಹಿಳೆ ಐಜಾಜ್‌ಉಲ್ ಬೇಗಂ ಎಲ್ಲರೂ ಸದಸ್ಯರು. ಈಗ ೨೯೦ ಜನ ಸದಸ್ಯರಿದ್ದೇವೆ. ಕೆಲವರು ಮಾತನಾಡಲು ನಿಂತಾಗ ನಿದ್ರೆಯೂ ಬರುತ್ತೆ. ಕಾಫಿ, ಟೀ ವಿಷಯ ಹೇಳುತ್ತ ಇದ್ದೆ. ಒಂದು ಕಪ್ಪಿಗೆ ಎಂಟಾಣೆ, ಒಂದು ಊಟಕ್ಕೆ ೩ ರೂ. ೮ ಆಣೆ. ದಿನಕ್ಕೆ ನಮಗೆ ೪೫ ರೂ. ಕೊಡುತ್ತ ಇರುವುದರಿಂದ ದುಡ್ಡಿನ ಬೆಲೆ ಕಾಣುವುದಿಲ್ಲ. ಬೇರೆ ಹೋಟಲುಗಳಿಗೆ ಹೋದರೆ ದಿನಕ್ಕೆ ೨೦ ರೂ. ಆಗುತ್ತೆ. ಆದರೂ ಚೆನ್ನಾಗಿರುವುದಿಲ್ಲ ಎಂದು ಹೇಳುತ್ತಾರೆ.

ದಿನವೂ ಇಲ್ಲಿ ಬೆಳಿಗ್ಗೆ ಕಾಂಗ್ರೆಸ್ ಪಾರ್ಟಿ ಮೀಟಿಂಗ್ ಆಗುತ್ತೆ ಎಂದು ತಿಳಿಸಿದ್ದೆ. ಇಲ್ಲಿಯೂ ನಮ್ಮ ಹಾಗೆಯೇ ಕಚ್ಚಾಡುತ್ತಾರೆ.

ನಮಗಿಂತ ಜೋರು. ಕೊಯಿಮುತ್ತೂರಿನ ಅನಂತಶಯನಂ ಅಯ್ಯಂಗಾರ್ ಮತ್ತು ಡಾಕ್ಟರ್ ಪಟ್ಟಾಭಿ ನಿನ್ನೆ ಬೆಳಿಗ್ಗೆ ಬಹಳ ಬಿರುಸಾಗಿಯೇ ಮಾತನಾಡಿದರು. ನಾವು ಅಂದರೆ ಸಂಸ್ಥಾನಗಳಿಂದ ಬಂದ ಕಾಂಗ್ರೆಸ್ ಪ್ರತಿನಿಧಿಗಳು. ನಿತ್ಯವೂ ಡಾಕ್ಟರ್ ಪಟ್ಟಾಭಿಯವರನ್ನು ಕಾಣುತ್ತೇವೆ.

ಇದುವರೆಗೆ ದಿವಾನರುಗಳು ದೂರದೂರವೇ ಇದ್ದರು. ಅವರ ಜರೀ ಪೇಟಗಳಿಗೆ ಇಲ್ಲಿ ಬೆಲೆಯೇ ಇಲ್ಲ. ರಾಷ್ಟ್ರದ ಮಹಾನಾಯಕರುಗಳ ಮಧ್ಯೆ ಅವರನ್ನು ಕೇಳುವವರೇ ಇಲ್ಲ. ಈಗ ಅವರಿಗೂ ಸ್ವಲ್ಪ ಬಿಸಿ ತಗುಲಿದೆ. ಪ್ರಜೆಗಳ ಸಹಾಯವಿಲ್ಲದೆ ತಮ್ಮ ದಂಡವಾಳ ಏನೂ ನಡೆಯುವುದಿಲ್ಲ ಎಂದು ಗೊತ್ತಾಗಿರುವಂತೆ ತೋರುತ್ತೆ. ಅವರನ್ನು ನಮ್ಮ ಕಡೆ ಸಾಧ್ಯವಾದರೆ ತಿರುಗಿಸಿಕೊಳ್ಳಲು ನಮ್ಮ (ಪ್ರಜಾಪ್ರತಿನಿಧಿಗಳ) ಮತ್ತು ದಿವಾನರುಗಳ ಸಭೆಯನ್ನು ಕರೆಯೋಣ ಎಂದಿದ್ದೆವು. ಅದಕ್ಕೆ ಮುಂಚೆ ನಿನ್ನೆ ಸಂಜೆ ಅವರೇ ಸಭೆ ಸೇರಿಸಿದರು. ಬರೋಡ ದಿವಾನ್ ಬಿ. ಎಲ್. ಮಿತ್ತರ್, ಪಿ. ಟಿ. ಕೃಷ್ಣಮಾಚಾರ್, ರಾಮಸ್ವಾಮಿ ಮೊದಲಿಯಾರ್, ಪಾಣಿಕ್ಕರ್, ಶ್ರೀನಿವಾಸನ್, ಮಾಧವರಾವ್ ಎಲ್ಲರೂ ಹೊಸದಾಗಿ ಮದುವೆಯಾದವನು ಹೆಂಡತಿಯನ್ನು ಒಲಿಸಿಕೊಳ್ಳಲು ಪ್ರಯತ್ನ ಪಡುವಂತೆ ಪ್ರಯತ್ನಿಸುತ್ತಿದ್ದರು. ಇಂಡಿಯಾ ಸ್ವಾತಂತ್ರ್ಯ ಮಸೂದೆಯ ಸ್ವಾತಂತ್ರ್ಯಪಠನ ಲಂಡನ್ನಲ್ಲಿ ಆಯಿತು. ಇಲ್ಲಿಯೂ ೨೫ನೇ ತಾರೀಖಿನ ದಿನ ವೈಸರಾಯರು ರಾಜರುಗಳಿಗೆ, ಅವರ ದಿವಾನರುಗಳಿಗೆ ಇದೇ ಆಗಸ್ಟು ೧೫ರಿಂದ ಇಂಡಿಯಾ ಡೊಮಿನಿಯನ್ ಸೇರಿ ಎಂದು ಹೇಳಲು ಒಂದು ಸಭೆ ಸೇರಿಸಿರುತ್ತಾರೆ. ಲಂಡನ್ನಲ್ಲಿ ಸರ್ ಹಟ್ಲೀ ಷಾಕ್ರಾಸ್ ಯಾವ ಸಂಸ್ಥಾನಗಳ ಸ್ವಾತಂತ್ರ್ಯವನ್ನೂ ಅಂತರರಾಷ್ಟ್ರೀಯ ರಾಷ್ಟ್ರಗಳು ಒಪ್ಪುವಂತೆ ನಾವು ಸಹಾಯ ಮಾಡುವುದಿಲ್ಲ ಎಂದಿದ್ದಾನೆ. ಇದನ್ನೆಲ್ಲ ನೋಡಿ ಈಗ ಈ ದಿವಾನರುಗಳು ನಮ್ಮನ್ನು ಒಲಿಸಿಕೊಳ್ಳಲು ಬಂದಿದ್ದಾರೆ. ನಾವು ಬಿಗಿಯಾಗಿಯೇ ಇದ್ದೇವೆ. ಆದರೆ ಇದು ಒಂದು ಶುಭ ಸೂಚನೆ ಎಂದು ಹೇಳಬಹುದು.

ಈಗ ನಾವು ಮೈಸೂರಿನ ಏಳು ಜನರೂ ಸೇರಿ ದಿನಕ್ಕೆ ೩೦ ರೂಪಾಯಿಗೆ ಒಂದು ಕಾರ್ ಗೊತ್ತುಮಾಡಿದ್ದೇವೆ. ಒಬ್ಬೊಬ್ಬರಿಗೆ ೪-೫ ರೂಪಾಯಿಯಂತೆ ದಿನಕ್ಕೆ ಬೀಳುತ್ತೆ. ಶನಿವಾರ ಭಾನುವಾರ ರಜ. ಸಭೆ ಇಲ್ಲ. ಅನುಕೂಲವಾದರೆ ಎಲ್ಲಾದರೂ ಹೋಗಲು ಸಾಧ್ಯವಾಗುತ್ತೇನೋ ನೋಡಬೇಕು.

೨೦-೭-೪೭

ನಾನು ಇಲ್ಲಿಗೆ ಬಂದು ಈಗಾಗಲೆ ಒಂದು ವಾರವಾಯಿತು. ನಿನ್ನಿಂದ ಕಾಗದವೇ ಬರಲಿಲ್ಲ. ಏಕೆ? ಏರ್ ಮೇಲ್ ಚೀಟಿ ಮತ್ತು ೦-೨-೬ ಸ್ಟಾಂಪು ಅಂಟಿಸಿ ಕಾಗದ ಹಾಕಿದರೆ ಬೇಗ ಬರುತ್ತೆ. ಪ್ರಾಯಶಃ ಈ ತಿಂಗಳು ಕೊನೆಯಲ್ಲಿ ನಮ್ಮ ಸಭೆ ಮುಗಿಯಬಹುದು. ಇಂಡಿಯಾಕ್ಕೆ ೧೭-೭-೪೭ನೆ ಶನಿವಾರದಿಂದ ಸ್ವಾತಂತ್ರ್ಯ ದೊರೆತಿರುವುದನ್ನು ನೀನು ಪತ್ರಿಕೆಗಳಲ್ಲಿ ಓದಿರಬಹುದು. ಆಗಸ್ಟು ೧೫ನೆ ತಾರೀಖಿಗೆ ಬ್ರಿಟಿಷರು ಇಂಡಿಯಾ ಡೊಮಿನಿಯನ್‌ಗೂ ಪಾಕಿಸ್ಥಾನ ಡೊಮಿನಿಯನ್‌ಗೂ ಅಧಿಕಾರ ವಹಿಸುತ್ತಾರೆ. ೧೫ನೆ ತಾರೀಖು ಇಲ್ಲಿ ಭಾರಿ ಉತ್ಸವ ಏರ್ಪಡಿಸುವ ಯೋಚನೆ ಮಾಡಿದ್ದಾರೆ. ಆ ದಿನ ಕಾನ್‌ಸ್ಟಿಟ್ಯುಯೆಂಟ್ ಅಸೆಂಬ್ಲಿಯಲ್ಲಿ ವೈಸರಾಯರು ಭಾಷಣ ಮಾಡುತ್ತಾರೆ. ಭಾರತದ ರಾಷ್ಟ್ರಧ್ವಜ ಅಂದು ವೈಸರಾಯ ಭವನದ ಮೇಲೆ ಹಾರಾಡುತ್ತೆ. ಅದಕ್ಕೋಸ್ಕರ ಪುನಃ ೧೨ನೆ ತಾರೀಖಿಗೆ ಅಧಿವೇಶನ ಸೇರುತ್ತೆ. ಆದ್ದರಿಂದ ಪುನಃ ಬರಬೇಕಾಗುವಂತೆ ತೋರುತ್ತದೆ. ಇನ್ನೂ ಯಾವುದನ್ನೂ ನಮಗೆ ತಿಳಿಸಿಲ್ಲ.

ರಾಷ್ಟ್ರಧ್ವಜವು ಸ್ವಲ್ಪ ಬದಲಾವಣೆ ಮಾಡಲಾಗಿದೆ. ಇನ್ನುಮೇಲೆ ರಾಟೆಯ ಗುರ್ತು ಅದರ ಮೇಲೆ ಇರುವುದಿಲ್ಲ. ಅದರ ಬದಲು ಅಶೋಕ ಸ್ತಂಭದ ಚಕ್ರ ಇರುತ್ತೆ. ಚಕ್ರ ಹಿಂದೂಗಳ ಆರಾಧ್ಯ ದೇವರಾದ ಸೂರ್ಯನಾರಾಯಣನ ಸಂಕೇತ. ರಾಟೆ ಮತ್ತು ಗ್ರಾಮ ಕೈಗಾರಿಕೆಯ ಸಂಕೇತ. ಕಾಲ ಮತ್ತು ಪ್ರಗತಿ ಈ ಚಕ್ರದ ಸಂಕೇತ. ಯುಗಪುರುಷನಾದ ಅಶೋಕ ಚಕ್ರವರ್ತಿಯು ಈಗ ೨೦೦೦ ವರ್ಷಗಳ ಹಿಂದೆ

ನಿಲ್ಲಿಸಿದ್ದು ಧರ್ಮಚಕ್ರ; ಆದ್ದರಿಂದ ನಮ್ಮ ಸಂಸ್ಕೃತಿಯ ಸಂಕೇತ ಧ್ವಜದ ಬಣ್ಣಗಳು ಅವೇ ಇರುತ್ತವೆ. ಬಿಳಿ ಪಟ್ಟಿಯ ಮಧ್ಯೆ ಕಪ್ಪು ನೀಲಿಯಲ್ಲಿ ಚಕ್ರವಿರುತ್ತದೆ. ಸಾಧ್ಯವಾದರೆ ನಾನು ಬರುವಾಗ ಒಂದು ಬಾವುಟ ತರುತ್ತೇನೆ. ಆ ದಿನ ನೀವೂ ಧ್ವಜವಂದನೆ ಮಾಡಿ ಹಬ್ಬವನ್ನಾಗಿ ಆಚರಿಸಬೇಕು. ತಿಥಿ ಏನಾಗುತ್ತೊ ನನಗೆ ಇಲ್ಲಿ ಗೊತ್ತಾಗುವುದಿಲ್ಲ. ಗಾಂಧಿಯವರು ಆ ಧ್ವಜಕ್ಕೆ ಒಪ್ಪಿಗೆ ಇತ್ತಿದ್ದಾರೆಂದು ಕಾಂಗ್ರೆಸ್ ಪಾರ್ಟಿಯಲ್ಲಿ ಪಂಡಿತ ಜವಹರಲಾಲರು ತಿಳಿಸಿದರು. ಪಾರ್ಟಿಯೂ ಒಪ್ಪಿದೆ. ನಾಳೆ ಘಟನಾ ಸಮಿತಿಯಲ್ಲಿ ಒಪ್ಪಿಗೆ ದೊರೆಯುತ್ತದೆ.

ಶುಕ್ರವಾರ ಸಂಜೆ ಜವಹರಲಾಲರು ಪಾರ್ಟಿ ಸಭೆಯಲ್ಲಿ ಒಂದು ಮಹತ್ತರವಾದ ಭಾಷಣಮಾಡಿದರು. "ಜಿನ್ನಾ ವೈಸರಾಯ್ ಆದ. ನಾವು ಮಾತ್ರ ಬ್ರಿಟಿಷ್‌ರವನಾದ ಮೌಂಟ್‌ಬ್ಯಾಟನ್‌ನನ್ನ ವೈಸರಾಯ್ ಆಗಿ ಇಟ್ಟುಕೊಂಡಿದ್ದೇವೆ. ಇನ್ನೂ ಬ್ರಿಟಿಷನವರನ್ನೇ ಗವರ್ನರುಗಳನ್ನಾಗಿ ಉಳಿಸಿಕೊಳ್ಳುವ ಯೋಚನೆ ಮಾಡುತ್ತಿದ್ದೇವೆ. ಪಾಕಿಸ್ಥಾನಕ್ಕೆ ಒಪ್ಪಿಕೊಂಡು ಭಾರತದ ಇಬ್ಭಾಗ ಮಾಡಿಯಾಯಿತು. ಇದುವರೆಗೆ ಕಾಂಗ್ರೆಸ್‌ನವರನ್ನು ಬೈಯುತ್ತ ಬ್ರಿಟಿಷರ ಕೈಗೊಂಬೆಗಳಾಗಿದ್ದ I.C.S. ಅಧಿಕಾರಿಗಳನ್ನೇ ದೊಡ್ಡ ದೊಡ್ಡ ಸ್ಥಾನಗಳಿಗೆ ಏರಿಸಲಾಗುತ್ತಿದೆ. ಮನೆಮಠಗಳನ್ನು ಕಳೆದುಕೊಂಡು ಸರ್ವತ್ಯಾಗ ಮಾಡಿದವರಿಗೆ ಸ್ಥಾನವಿಲ್ಲ" ಎಂದು ಮುಂತಾಗಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯವರ ಮೇಲೆ ಅನೇಕ ಟೀಕೆಗಳು ಬಂದವು. ಇದೆಲ್ಲ ಜವಹರಲಾಲರ ಕಿವಿ ಮುಟ್ಟಿತು. ಅವರು ಮಾತನಾಡಿದಾಗ ಬಹಳ ಮನ ನೊಂದು ಉದ್ವೇಗದಿಂದ ಭಾಷಣಮಾಡಿದರು. ವಾಯುಬಲ, ಭೂಸೈನ್ಯದಲ್ಲಿ ನಮ್ಮಲ್ಲಿ ತರಪೇತಾದ ಅಧಿಕಾರಿಗಳಲ್ಲಿ ಬಹಳ ಸಣ್ಣ ದರ್ಜೆಯ ಅಧಿಕಾರಿಗಳನ್ನು ಒಮ್ಮೆಯೇ ಉನ್ನತ ಅಧಿಕಾರಕ್ಕೇರಿಸುವುದು ರಾಜನೀತಿಯಲ್ಲ. ಆ ನಮ್ಮ ಅಧಿಕಾರಿಗಳೂ ಅದಕ್ಕೆ ಸಮ್ಮತಿಸಲಿಲ್ಲ. ಪ್ರತಿಯೊಬ್ಬ ಬ್ರಿಟಿಷ್ ಅಧಿಕಾರಿಯೂ ಮುಸ್ಲಿಂ ಲೀಗ್

ಪರ. ಜಿನ್ನಾ ಸಹ ಕೇಂದ್ರದಲ್ಲಿ ಒಬ್ಬನೇ ಅಧಿಕಾರಿ ಇರಬೇಕು ಎಂದು ಒಪ್ಪಿದ್ದ. ಆದರೆ ಇಬ್ಬರು ವೈಸರಾಯರು ಅವರ ಮೇಲೆ ಇನ್ನೊಬ್ಬ ಸೂಪರ್ ವೈಸರಾಯ್ ಇರಬೇಕೆಂದೂ, ಆತನು ಮೌಂಟ್‌ಬ್ಯಾಟನ್ ಆಗಬಹುದು ಎಂದಿದ್ದ. ಅದಕ್ಕೆ ನಾವು ಒಪ್ಪಿದೆವು. ಇದು ಒಂದೂವರೆ ತಿಂಗಳ ಹಿಂದೆಯೇ ನಡೆದದ್ದು. ಜಿನ್ನಾ ತಾನೇ ಪಾಕಿಸ್ಥಾನಕ್ಕೆ ವೈಸರಾಯ್ ಆಗಬೇಕೆಂದು ಇಷ್ಟಪಡುತ್ತಾನೆಂದು ನಮಗೆ ತಿಳಿದಿರಲಿಲ್ಲ. ಅದು ಗೊತ್ತಾದದ್ದು ಈಗ ಈ ಘಟನಾಸಭೆ ಸೇರುವ ೨-೩ ದಿನಗಳ ಹಿಂದೆ ಮಾತ್ರ. ವೈಸರಾಯ್ ಸಹ ಲಂಡನ್ನಿಗೆ ಜಿನ್ನಾನ ಅಭಿಮತವನ್ನು ತಿಳಿಸಿದ್ದರು. ಅದು ವೈಸರಾಯರಿಗೂ ಇಷ್ಟವಿರಲಿಲ್ಲ. ಆದರೆ ಲಂಡನ್ನಿನಿಂದ ಇಬ್ಬರು ವೈಸರಾಯರು ಎಂದು ತೀರ್ಮಾನಿಸಿ, ಉತ್ತರ ಬಂದಾಗ ವೈಸರಾಯ್ ಸಹ ಮನಸ್ಸು ನೊಂದು ನಮ್ಮ ಅಭಿಪ್ರಾಯ ವನ್ನು ಕೇಳಿದರು. ನಾವು ಮೊದಲೇ ಮಾತು ಕೊಟ್ಟಿದ್ದೆವು. ಸೈನ್ಯ ಇಬ್ಭಾಗ ಮಾಡುವಾಗ ಬ್ರಿಟಿಷ್ ಅಧಿಕಾರಿಗಳು ಯಾರ ಮಾತನ್ನು ಚಾಚೂ ತಪ್ಪದೆ ನಡೆಸುತ್ತಾರೋ ಅಂಥ ವೈಸರಾಯ ಒಬ್ಬನಿದ್ದರೆ ಒಳ್ಳೆಯದೆಂದು ಒಪ್ಪಿದೆವು. ಈಗ ಇರುವವರ ಪ್ರಾಂತ್ಯದ ಮುಖ್ಯ ಮಂತ್ರಿಗಳು, ಶಾಶನ ಸಭೆಯ ಸದಸ್ಯರ ಅಭಿಪ್ರಾಯ ಪಡೆದು ಇಬ್ಬರು ಭಾರತೀಯರು. ಇಬ್ಬರು ಬ್ರಿಟಿಷ್ ಗವರ್ನರ್‌ಗಳು ಮಾತ್ರ ಉಳಿಯಲೆಂದು ತೀರ್ಮಾನಿಸಿದ್ದೇವೆ. ಇನ್ನಿತರರು ರಾಜಿನಾಮೆ ಕೊಡುತ್ತಾರೆ. ಕಾಂಗ್ರೆಸ್ ದ್ವೇಷಿಗಳನ್ನು ಉನ್ನತ ಅಧಿಕಾರಿಗಳನ್ನಾಗಿ ನೇಮಿಸಿರುವವರಲ್ಲಿ ಜಿ. ಎಸ್. ಬಾಜಪೈ ಮುಖ್ಯರು. ಅವರ ಮೇಲಿನ ಆಪಾದನೆಗಳನ್ನು ವಿಚಾರಿದ್ದೇನೆ. ಅದರಲ್ಲಿ ಸತ್ಯಾಂಶವಿಲ್ಲವೆಂದು ನನಗೆ ಮನಗಂಡಿದೆ. ಸರಕಾರದ ಅಧಿಕಾರಿಗಳಾದ ಮೇಲೆ ಯಾವ ಸರಕಾರದ ಉಪ್ಪು ತಿಂದಿರುತ್ತಾರೋ ಅವರ ಸೇವೆ ಮಾಡಬೇಕು. ಈಗ ಎಲ್ಲ ಬದಲಾವಣೆಯಾಗಿದೆ. ಆಗ ನಮ್ಮ ವಿರೋಧ ಕೆಲಸ ಮಾಡಿದವರು ಈಗ ನಮ್ಮ ಮಾತು ಕೇಳುವುದಿಲ್ಲವೆನ್ನುವುದು ತಪ್ಪು. I.C.S. ಅಧಿಕಾರಿಗಳಲ್ಲಿ ಬುದ್ಧಿವಂತರೂ, ಅನುಭವಸ್ಥರೂ ಅನೇಕ

ರಿದ್ದಾರೆ. ಅವರ ಸಹಾಯ ನಮಗೆ ಬೇಕು. ಇಲ್ಲವಾದರೆ ಕೈಗೆ ಬಂದ ಸ್ವಾತಂತ್ರ್ಯವನ್ನೂ ಕಳೆದುಕೊಂಡೇವು. ನನಗೆ ಸರಿಯೆಂದು ತೋರಿದೆ, ಅದನ್ನು ಮಾಡಿದ್ದೇನೆ. ಅದು ಸರಿಯೆಂದು ನಿಮಗೆ ಒಪ್ಪಿಗೆ ಇಲ್ಲದಿದ್ದರೆ ನಿಮಗೆ ಸರಿತೋರಿದವರನ್ನೇ ಅಧಿಕಾರಸ್ಥಾನಕ್ಕೆ ಏರಿಸಿ. ನಿಮ್ಮ ನಂಬಿಕೆಗೆ ನಾನು ಯೋಗ್ಯನಲ್ಲದಿದ್ದರೆ ಅದು ನನ್ನ ದುರದೃಷ್ಟ" ಎಂದು ಮುಂತಾಗಿ ಮುಕ್ಕಾಲು ಗಂಟೆ ಮಾತನಾಡಿದರು. ಅವರು ಕುಳಿತ ಒಡನೆ ಎಲ್ಲರೂ ಅವರಲ್ಲಿ ನಂಬಿಕೆಯನ್ನು ವ್ಯಕ್ತ ಪಡಿಸಿದರು. ವಿರೋಧ ಮಾಡಿದವರೆಲ್ಲ ತಣ್ಣಗಾದರು. ಇಂತಹ ಘಟನೆಗಳು ಆಗಾಗ್ಗೆ ನಡೆಯುತ್ತವೆ. ತಿರುವಾಂಕೂರಿನ ರಾಮಸ್ವಾಮಿ ಅಯ್ಯರ್ ಬಂದಿದ್ದಾರೆ. ಹೈದರಾಬಾದಿನಿಂದ ನೈಜಾಮರ ಕಡೆ ಯವರೂ ಬಂದಿದ್ದಾರೆ. ವೈಸರಾಯರನ್ನು ಕಾಣುವುದಕ್ಕೆ ಈ ಕಡೆ ಹೈದರಾಬಾದಿನಿಂದ ಕಾಂಗ್ರೆಸ್ಸಿನವರು ಕಾಂಗ್ರೆಸ್ ನಾಯಕರನ್ನು ನೋಡಲು ಬಂದಿದ್ದಾರೆ. ೨೫ನೆ ತಾರೀಖು ರಾಜರುಗಳ ಮತ್ತು ಇಂಡಿಯಾ ಸರಕಾರದ ಪರ ವಲ್ಲಭಾಯಿ ಪಟೇಲರ ಭೇಟಿ. ಆಗ ಅಧ್ಯಕ್ಷರು ವೈಸರಾಯ್. ಅಂತೂ ಚಕ್ರವ್ಯೂಹ. ಇದೆಲ್ಲ ನಿನಗೆ ಅರ್ಥ ವಾಗುತ್ತೋ ಇಲ್ಲವೋ ಕಾಣೆ. ಒಂದು ಕಡೆಯಿಂದ ಹೈದರಾಬಾದಿನ ನೈಜಾಮ್ ಬೀರಾರನ್ನು ಸೈನ್ಯ ತೆಗೆದುಕೊಂಡು ಮುತ್ತಿಗೆ ಹಾಕುತ್ತಾನೆ ಎನ್ನುತ್ತಾರೆ. ಇನ್ನೊಂದು ಕಡೆ ಪಾಕಿಸ್ಥಾನದ ಮುಸಲ್ಮಾನರ ತರಲೆ. ಒಳಗೆ ಕಾಂಗ್ರೆಸ್ ಕೆಲಸಗಾರರಲ್ಲಿ ಅಸಮಾಧಾನ. ಭಾಷಾವಾರು ಪ್ರಾಂತ ಗಳ ಪ್ರಶ್ನೆ, ದೇಶೀಯ ಸಂಸ್ಥಾನಗಳ ಸಮಸ್ಯೆ, ಎರಡು ಸರಕಾರ ಗಳನ್ನು ಏರ್ಪಡಿಸುವ ಪ್ರಶ್ನೆ, ವಿಭಾಗದ ಪ್ರಶ್ನೆ. ವಿಭಾಗ ಎಂದರೆ ಎಲ್ಲ ವಿಭಾಗ ಮಾಡಬೇಕು. ಅಣ್ಣತಮ್ಮಂದಿರು ಪಾಲು ಮಾಡಿ ಕೊಳ್ಳಬೇಕೆಂದರೆ ಎಷ್ಟು ವ್ಯಾಜ್ಯ, ಎಷ್ಟು ಪಂಚಾಯಿತಿ, ಎಷ್ಟು ಕಾಲಹರಣ! ಹಾಗೆಂದಮೇಲೆ ೪೦ ಕೋಟಿ ಪ್ರಜೆಗಳಿರುವ ಭಾರತ ದಲ್ಲಿ ಕೇವಲ ಇನ್ನೊಂದು ತಿಂಗಳು—ತಿಂಗಳೂ ಇಲ್ಲ—೨೫ ದಿನಗಳಲ್ಲಿ ವಿಭಾಗಮಾಡುವುದು ಸುಲಭವೇ? ಇದರ ಮೇಲೆ ಬೆಳಿಗ್ಗೆ ಕಾಂಗ್ರೆಸ್

ಪಾರ್ಟಿ ಮೀಟಿಂಗ್, ೧೦—೧ ಘಟನಾಸಭೆ. ಅಂತೂ ಭಾರತದ ನಾಯಕರ ತಾಳ್ಮೆ, ಶಕ್ತಿ, ಸಹನ ಗುಣ, ಕಾರ್ಯದಕ್ಷತೆ ನೋಡಿದರೆ ಆಶ್ಚರ್ಯವಾಗುತ್ತದೆ. ಈ ಕಾಲದಲ್ಲಿ ಜೀವಿಸಿರುವುದೇ ಒಂದು ಪುಣ್ಯ, ಅದರಲ್ಲೂ ಪ್ರತ್ಯಕ್ಷ ಭಾಗಿಯಾಗುವುದೆಂದರೆ ಪೂರ್ವಜನ್ಮದ ಸುಕೃತ !

೨೪-೭-೧೯೪೭

ನಿನಗೆ ಕಾಗದ ಬರೆದು ಮೂರು ದಿನಗಳಾದವು. ನಿತ್ಯ ಬರೆಯೋಣವೆಂದರೆ ಬಿಡುವು ದೊರೆಯುವುದಿಲ್ಲ. ಈಗ ಪುನಃ ರಮುಜಾನ್ ನಿಮಿತ್ತ ಬೆಳಿಗ್ಗೆ ೧೦ ರಿಂದ ೧ ಗಂಟೆವರೆಗೆ ಸಭೆ ಆರಂಭ ವಾಗಿದೆ. ಸಂಜೆ ಪುನಃ ೬—೮ ರವರಗೆ ಪಾರ್ಟಿ ಸಭೆ. ಸಭೆಗೆ ಹೋಗುವುದು, ಓದುವುದು, ಬರೆಯುವುದು, ಚರ್ಚೆಮಾಡುವುದು ಇದರಲ್ಲಿ ಕಾಲವೇ ದೊರೆಯುವುದಿಲ್ಲ. ಮೊನ್ನೆ ೨೨-೭-೪೭ನೇ ದಿನ ರಾಷ್ಟ್ರಧ್ವಜವನ್ನು ಸಭೆ ಒಪ್ಪಿದ್ದನ್ನು ನೀನು ವರ್ತಮಾನ ಪತ್ರಿಕೆಗಳಲ್ಲಿ ಓದಿರಬಹುದು. ಪಂಡಿತ ಜವಹರಲಾಲ್‌ರು ಒಂದು ಗಂಟೆಯ ಕಾಲ ಒಂದು ಅಪೂರ್ವ ಉಜ್ವಲ ಭಾಷಣವನ್ನು ಮಾಡಿದರು. ರಾಷ್ಟ್ರಧ್ವಜದ ಅಡಿಯಲ್ಲಿ ಕಳೆದ ಒಂದು ಶತಮಾನದಿಂದ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ ವೀರರ ತ್ಯಾಗ, ತ್ಯಾಗದಿಂದ ತಮ್ಮ ಪ್ರಾಣವನ್ನು ಅರ್ಪಿಸಿದ ದೇಶಪ್ರೇಮಿಗಳ ಸ್ಮರಣೆ, ಇದುವರೆಗೆ ಇದ್ದ ಚರಕದ ಸಂಕೇತವನ್ನು ಬಿಡಬೇಕಾಗಿ ಬಂದಿರುವುದರಲ್ಲಿ ಒದಗಿರುವ ಸಂಕಟ, ಹೊಸ ರಾಷ್ಟ್ರಧ್ವಜದ ಅಂದ ಮತ್ತು ಏಕಮುಖತೆಯ ಆವಶ್ಯಕತೆ, ಅಶೋಕ ಚಕ್ರವರ್ತಿಯ ಚಕ್ರದ ಸಂಕೇತ, ಧರ್ಮ, ಪ್ರಗತಿ, ಇತಿ ಹಾಸ, ಸಂಸ್ಕೃತಿಯ ಸ್ಮರಣೆ, ಈಗಿನ ಚಕ್ರವು ಹಿಂದಿನ ಸಹಸ್ರಾರು ವರ್ಷಗಳ ಸಂಸ್ಕೃತಿಗೂ ಈಗಿನ ಪ್ರಗತಿಗೂ, ನೂತನಯುಗದ ಬಾಳಿಗೂ ಕಲ್ಪಿಸುವ ನಿಕಟ ಸಂಬಂಧ, ಅದಕ್ಕೆ ಮಹಾತ್ಮರ ಒಪ್ಪಿಗೆ, ಭಾರತಾದ್ಯಂತವಲ್ಲದೆ ವಿಶ್ವದ ಸಪ್ತ ಸಮುದ್ರಗಳಮೇಲೆ, ಪರರಾಷ್ಟ್ರಗಳಲ್ಲಿ ಅದಕ್ಕೆ ದೊರೆಯಬೇಕಾದ ಗೌರವ ಎಲ್ಲವನ್ನು ವಿಶದವಾಗಿ ಹೃದಯಂಗ ಮವಾಗಿ ವಿವರಿಸಿದರು. ಇಡೀ ಸಭೆಯಲ್ಲೇ ಬಂದು ಅಪೂರ್ವ

ಉತ್ಸಾಹವೂ ಆನಂದಲಹರಿಯೂ ಎದ್ದು ತೋರುತ್ತಿದ್ದವು. ವಂದೇ ಮಾತರಂ, ಮಹಾತ್ಮಾ ಗಾಂಧೀಕಿ ಜೈ ಎಂಬ ಘೋಷಣೆ, ಕರತಾಡನಗಳ ಸುರಿಮಳೆ, ಫ್ಲ್ಯಾಷ್ ಲೈಟ್ ಫೋಟೋಗ್ರಾಫರುಗಳ ಕ್ಲಿಕ್ ಶಬ್ದಗಳ ಮಧ್ಯೆ ಇಡೀ ಸಭೆಯೇ ಎದ್ದು ನಿಂತು ನಮಸ್ಕರಿಸಿದಾಗ ರಾಷ್ಟ್ರಧ್ವಜವನ್ನು ಜವಹರರು ಬಿಚ್ಚಿ ಸಭೆಗೆ ತೋರಿಸಿದರು. ನನಗಂತೂ ಕಣ್ಣಿನಲ್ಲಿ ಆನಂದಬಾಷ್ಪವು ಸುರಿಯಿತು. ಅಂತೆಯೇ ಸರ್ ಎಸ್. ರಾಧಾ ಕೃಷ್ಣನ್, ಸರೋಜಿನಿ ನಾಯ್ಡು ಇವರುಗಳ ಭಾಷಣಗಳು ಮೇಲ್ಮಟ್ಟ ದಲ್ಲಿದ್ದವು. ಮುಸ್ಲಿಂ ಲೀಗಿನವರು, ಕ್ರಿಶ್ಚಿಯನರು, ಸಿಕ್ಕರು, ಹರಿ ಜನರು ಎಲ್ಲರೂ ಆ ಧ್ವಜಕ್ಕೆ ತಮ್ಮ ಗೌರವವನ್ನು ಸಲ್ಲಿಸಿದರು. ಆ ದಿನ ವೆಲ್ಲ ಸಂತೋಷದ ಭರದಲ್ಲಿ, ಧ್ವಜದ ದಿನವೆಂದು ತೀರ್ಮಾನವಾಗಿ ಧ್ವಜದಮೇಲೆ ಭಾಷಣಗಳಾದವು. ಮಾತನಾಡಬೇಕೆಂದು ನಾನೂ ಅಧ್ಯಕ್ಷರಿಗೆ ಚೀಟಿ ಕಳುಹಿಸಿದ್ದೆ. ಆದರೆ ಅವಕಾಶ ದೊರೆಯಲಿಲ್ಲ. ಅಂತೂ ಅದೊಂದು ಅಪೂರ್ವ ದೃಶ್ಯ! ಸರೋಜಿನಿ ದೇವಿಯವರು ಮಾತನಾಡಿದಾಗಲಂತೂ ಕಾವ್ಯವಾಹಿನಿಯೇ ಅವರ ಅಮೃತವಾಣಿ ಯಿಂದ ಹೊರಡುವಂತಿತ್ತು. ಪರರಾಷ್ಟ್ರಗಳಲ್ಲಿ ಹೋದಾಗ ಅಂತರ ರಾಷ್ಟ್ರೀಯ ಸಮಾರಂಭಗಳಲ್ಲಿ ಭಾರತದ ರಾಷ್ಟ್ರಧ್ವಜವೇ ಕಾಣುತ್ತಿರ ಲಿಲ್ಲವಾದ್ದರಿಂದ ನಾವು ಇತರ ರಾಷ್ಟ್ರಗಳ ಪ್ರತಿನಿಧಿಗಳ ಎದುರಿನಲ್ಲಿ ತಲೆ ತಗ್ಗಿಸಬೇಕಾಗಿತ್ತು. ಒಮ್ಮೆ ಪ್ಯಾರಿಸ್‌ನಲ್ಲಿ ಒಬ್ಬ ಮಹಿಳೆ ಭಾಷಣಮಾಡುತ್ತಿದ್ದಾಗ ಸಭಿಕರೊಬ್ಬರು ಆನಂದದ ಭರದಲ್ಲಿ ಆಕೆಯ ದೇಶದ ರಾಷ್ಟ್ರಧ್ವಜವನ್ನು ತಂದು ಆಕೆಗೆ ಹೊದಿಸಿದರು. ನನ್ನ ಪಕ್ಕ ದಲ್ಲಿದ್ದ ಭಾರತೀಯ ಮಹಿಳೆಯೊಬ್ಬಳು ನಮ್ಮ ರಾಷ್ಟ್ರಧ್ವಜ ನಮಗೆ ದೊರೆಯುವುದೆಂದು? ಎಂದು ವ್ಯಥೆಪಟ್ಟಳು. ಇಂದು ಆಸೆ ಕೈಗೂಡಿದೆ. ದಾಧಾಭಾಯಿ ನವರೋಜಿ, ಮಹಮ್ಮದಾಲಿ, ಷಾಕತ್ ಆಲಿ, ಅನ್ಸಾರಿ ಅಜಮಲ್‌ಖಾನ್, ಪಂಡಿತ ಮೋತಿಲಾಲ್ ನೆಹ್ರೂ ಇವರೆಲ್ಲ ಈ ದಿನಕ್ಕಾಗಿ ದುಡಿದು ಮಡಿದರು. ಇದು ಯಾವ ಜಾತಿ, ಕೋಮಿನ ಧ್ವಜವಲ್ಲ; ಇಡೀ ರಾಷ್ಟ್ರದ ಧ್ವಜ. ಅಶೋಕ ಚಕ್ರವರ್ತಿಯು ತನ್ನ ಧರ್ಮಚಕ್ರ

ದಿಂದ ಭಾರತದ ಸಂಸ್ಕೃತಿಯನ್ನು ಸಪ್ತ ಸಮುದ್ರಗಳಾಚೆ ಪರರಾಷ್ಟ್ರ ಗಳಿಗೆ ಕೊಂಡೊಯ್ದು ದಿಗ್ವಿಜಯಮಾಡಿ, ಯಶೋಧನನಾದಂತೆ ಈ ನಮ್ಮ ಧ್ವಜವು ಭಾರತದ ಕೀರ್ತಿಯನ್ನು ಬೆಳಗಲಿ. ನಮ್ಮ ಧ್ವಜಕ್ಕೆ ಎಲ್ಲರೂ ಏಕ ಕಂಠದಿಂದ ನಮಸ್ಕರಿಸೋಣ ಎಂದಾಗ ಇಡೀ ಸಭೆಯೇ ಎದ್ದು ನಿಂತು ಅರ್ಧ ನಿಮಿಷ ಮೌನದಿಂದ ತನ್ನ ಭಕ್ತಿಯ ಕಾಣಿಕೆಯನ್ನು ಸಲ್ಲಿಸಿತು. ಆ ದೃಶ್ಯವನ್ನು ಕಂಡು ಜೀವನ ಸಾರ್ಥಕ ವಾಯಿತು ಎಂದುಕೊಂಡೆ.

ರಾತ್ರಿ ಪಾರ್ಟಿ ಮೀಟಿಂಗ್. ಭಾರತದ ಸಂಯುಕ್ತಸರಕಾರದ ಅಧ್ಯಕ್ಷರಿಗೆ ಅವಸರದ ಸಂದರ್ಭಗಳಲ್ಲಿ ವಿಶೇಷಾಧಿಕಾರ ಇರಬೇಕೇ ಬೇಡವೇ ಎಂಬ ಪ್ರಶ್ನೆ. ಶ್ರೀ ಡಿ. ಪಿ. ಖೈತಾನರು ಇರಬೇಕು ಎಂದು ಒಂದು ತಿದ್ದುಪಡಿ ತಂದರು. ಪಂಡಿತ ಜವಹರಲಾಲರ ಮೈ ಬೆಂಕಿ ಯಾಯಿತು. ಕೆನ್ನೆಗೆ ರಪರಪ ಹೊಡೆದಂತೆ ಸಿಟ್ಟಿನಿಂದ " ನಾವು ಪ್ರಜಾ ಪ್ರಭುತ್ವವನ್ನು ಸ್ಥಾಪಿಸಲು ಹೊರಟಿದ್ದೇನೆ. ಒಬ್ಬ ವ್ಯಕ್ತಿಯು ಎಷ್ಟೇ ದೊಡ್ಡವನಾಗಿರಲಿ ಆತನಲ್ಲಿ ಸರ್ವಾಧಿಕಾರ ವಹಿಸುವುದು ದೊಡ್ಡ ತಪ್ಪು. ಅದು ಫಾಸಿಸ್ಟ್ ಮತ್ತು ಹಿಟ್ಲರಿಸಂ ನೀತಿ. ಆ ನೀತಿ ಯನ್ನು ಪ್ರತಿಪಾದಿಸುವವರು ಈ ಸಭೆಯಲ್ಲೇ ಇರಲು ಅಯೋಗ್ಯರು" ಎಂದುಬಿಟ್ಟರು. ಖೈತಾನರೆಂದರೆ ಬಿರ್ಲಾ ಕಂಪೆನಿಗಳ ಮ್ಯಾನೇಜರು. ಅವರ ವರಮಾನ ತಿಂಗಳಿಗೆ ೨೦,೦೦೦ ರೂಪಾಯಿ ಇರಬಹುದು. ಬಿರ್ಲಾಗಳು ಕೋಟ್ಯಾಧೀಶ್ವರರು. ಸುಮಾರು ಒಂದು ಕೋಟಿ ರೂಪಾಯಿ ವೆಚ್ಚದ ಮೇಲೆ ದೆಹಲಿಯಲ್ಲಿ ಒಂದು ಲಕ್ಷ್ಮೀನಾರಾಯಣ ದೇವಸ್ಥಾನ ಕಟ್ಟಿಸಿದ್ದಾರೆ. ಅಲ್ಲಿಯೇ ಛತ್ರ, ಪೋಸ್ಟಾಫೀಸ್, ಟೆಲಿ ಫೋನ್, ಪುಸ್ತಕ ಭಂಡಾರ, ರೀಡಿಂಗ್ ರೂಮ್, ಹರಿಕಥೆ ಮತ್ತು ಭಾಷಣಕ್ಕೆ ಮಂದಿರ. ರಾಮಾಯಣ, ಭಾರತ, ಭಾಗವತದ ಕೆತ್ತನೆಗಳು ನಾನು ಇನ್ನೂ ನೋಡಲು ಆಗಿಲ್ಲ. ನೆನ್ನೆ ಗಾಡಿಯಲ್ಲಿ ಬರುವಾಗ ಹೊರಗಡೆ ಮಾತ್ರ ನೋಡಿದೆ. ಜವಹರರ ಭಾಷಣ ಕೇಳಿ ಖೈತಾನರು ತಣ್ಣಗಾಗಿ ಒನಕೆಹುಳು ಮುದರಿದಂತೆ ಮುದುರಿಕೊಂಡರು. ನನಗೇನೋ

ಜವಹರರು ಅಷ್ಟು ಸಿಟ್ಟಿಗೆದ್ದುದು ಅನವಶ್ಯಕ. ಬೈತಾನರು "ಜವಹರರಿಗೆ ಇಷ್ಟವಿಲ್ಲದಿದ್ದರೆ ನಾನು ಒತ್ತಾಯ ಪಡಿಸುವುದಿಲ್ಲ" ಎಂದು ತಮ್ಮ ತಿದ್ದುಪಡಿಯನ್ನು ಹಿಂದಕ್ಕೆ ತೆಗೆದುಕೊಂಡದ್ದು ಹೇಡಿತನ ಎನಿಸಿತು. ಇಂತಹ ಘಟನೆಗಳು ಎಷ್ಟೋ ದಿನವೂ ನಡೆಯುತ್ತವೆ. ಪ್ರಜಾಪ್ರಭುತ್ವವೆಂದರೆ ಇದೇನೆ—ಯಾರಿಗೆ ಎಷ್ಟೇ ಅಪ್ರಿಯವಾಗಿರಲಿ ಚರ್ಚೆಯಿಂದ ಎಲ್ಲ ವಿಷಯಗಳನ್ನೂ ಬಹುಮತದಿಂದ ತೀರ್ಮಾನಿಸುವುದು.

ನಿನ್ನೆ ಮಧ್ಯಾಹ್ನ ನಾಲ್ಕು ಗಂಟೆಗೆ ಮಹಾತ್ಮಾ ಗಾಂಧಿಯವರಲ್ಲಿ ನಾನು, ಚಂಗಲರಾಯ ರೆಡ್ಡಿಯವರೂ ಹೋಗಿದ್ದೆವು. ಮದರಾಸಿನಲ್ಲಿ ನೋಡಿದ್ದಕ್ಕೂ ಈಗ್ಯೂ ಬಹಳ ಇಳಿದುಹೋಗಿದ್ದಾರೆ. ಮುಖದ ಮೇಲೆ ಆಗ ಇದ್ದ ಒಂದು ಆತ್ಮತೃಪ್ತಿ ಈಗ ಇಲ್ಲ. ಮೈ ಸ್ವಲ್ಪ ಬಾಡಿದೆ, ಶಕ್ತಿಯು ಕುಂದಿದೆ. ಬಿರ್ಲಾಗಳು ತಮ್ಮ ಒಂದು ಬಂಗಲೆಯನ್ನು ಬಿಟ್ಟುಕೊಡಲು ಸಿದ್ಧವಿದ್ದರೂ ಊರಿನ ಝಾಡಮಾಲಿಗಳ ಮಧ್ಯೆ "ಭಂಗಿ ಕಾಲೊನಿ"—ಭಂಗಿ ಎಂದರೆ ಝಾಡಮಾಲಿ—ಅಲ್ಲಿ ವಾಸ. ಅವರಿಗೆ ಎರಡು ಸಣ್ಣ ಕೋಣೆಗಳು, ಸ್ವಲ್ಪ ದೂರ ಎದುರಿಗೆ ಸ್ನಾನಕ್ಕೆ ಮನೆ, ಅಡಿಗೆಮನೆ. ಅದರ ಪಕ್ಕದಲ್ಲಿ ಊಟದ ಮನೆ. ಗಾಂಧೀಜಿಯವರ ಕೋಣೆ ಮಗ್ಗಲು ಚಾಪೆಯಲ್ಲಿ ಕಟ್ಟಿದ ೫-೬ ಕೋಣೆಗಳು, ಅದರಾಚೆ ರಾಮ, ಸೀತಾ, ಲಕ್ಷ್ಮಣ ಮತ್ತು ವಾಲ್ಮೀಕಿ ಮಹರ್ಷಿಗಳ ದೇವಸ್ಥಾನ. ಇನ್ನೂ ಆಚೆ ಅಷ್ಟೆ ದೂರದವರೆಗೆ ಕೆಲವು ಸಣ್ಣ ಕೋಣೆಗಳು. ಆ ಮೂಲೆಯ ಎದುರು ಒಂದು ವೇದಿಕೆ. ವೇದಿಕೆಯ ಮೇಲೆ ಕುಳಿತು ಸಂಜೆ ೭ ಗಂಟೆಗೆ ಅವರ ಪ್ರಾರ್ಥನೆ. ಆ ಪ್ರಾರ್ಥನಾ ಸಮಯದಲ್ಲೇ ಅವರ ಭಾಷಣ. ಈಗ ಅವರ ಭಾಷಣ ಕೇಳಬೇಕೆಂದರೆ ಪ್ರಾರ್ಥನಾಸಮಯದಲ್ಲಿ ಮಾತ್ರ. ೨೧-೭-೪೭ನೆ ದಿನ ಪ್ರಾರ್ಥನೆಗೂ ಹೋಗಿದ್ದೆವು. ದಿನವೂ ೭-೮ ಸಹಸ್ರ ಜನರು ನೆರೆಯುತ್ತಾರೆ. ಕೊಠಡಿಯ ಒಳಗೆ ನೆಲಕ್ಕೆಲ್ಲ ಜಮಖಾನೆ. ನಾವು ಹೋದಾಗ ೩-೪೫. ಆಗ ಸ್ವಲ್ಪ ಜಂಪು ತೆಗೆದುಕೊಳ್ಳುತ್ತಿದ್ದರು. ನಮಗೆ ೪ ಗಂಟೆಗೆ ಬನ್ನಿ ಎಂದು ಹೇಳಿದ್ದರು.

ನಾಲ್ಕು ಗಂಟೆಗೆ ಸರಿಯಾಗಿ ಒಳಗೆ ಬರಹೇಳಿದರು. ಒಂದು ಕಾಲು ಮಣೆಯ ಮುಂದೆ ಲೇಪಿನ ಮೇಲೆ ವೀರಮಂಡಿ ಹಾಕಿಕೊಂಡು ಕುಳಿತಿದ್ದರು. ನಾವು ಹೇಳವುದನ್ನೆಲ್ಲ ಕೇಳಿದರು. ಬಹಳ ಸಣ್ಣ ದನಿಯಲ್ಲಿ "ಈಗ ನಡೆಯುತ್ತಿರುವ ವಿದ್ಯಮಾನಗಳಿಂದ ನನಗೆ ತೃಪ್ತಿಯಿಲ್ಲ. ರಾಜರುಗಳೆಲ್ಲ ಮನಸ್ಸಿನಲ್ಲಿ ಏನೋ ಇಟ್ಟುಕೊಂಡು ಯೂನಿಯನ್ ಸೇರುತ್ತಿದ್ದಾರೆ; ತೆರೆದ ಮನಸ್ಸಿನಿಂದ ಸೇರುತ್ತಿಲ್ಲ. ಸಂಸ್ಥಾನದ ಪ್ರಜೆಗಳು ಬಹಳ ಜಾಗರೂಕರಾಗಿರಬೇಕು. ಇಲ್ಲವಾದರೆ ಇದುವರೆಗೆ ಮಾಡಿದ ಕೆಲಸವೆಲ್ಲ ನೀರಿನಲ್ಲಿ ಹೋಮ ಮಾಡಿದಂತೆ ಆದೀತು. ರಾಜರುಗಳಲ್ಲಿ ಅವರದೇ ಸಣ್ಣ ಸೈನ್ಯವಿದೆ, ಪೋಲೀಸ್ ದಳವಿದೆ. ಇದುವರೆಗೆ ಬ್ರಿಟಿಷರು ಇದ್ದುದರಿಂದ ಒಂದು ಭಯವಿತ್ತು. ಇನ್ನು ಮೇಲೆ ಅದೂ ಇರುವುದಿಲ್ಲ. ಮನಸ್ಸು ಮಾಡಿದರೆ ತುಳಿದು ಬಿಟ್ಟಾರು ಪ್ರಜೆಗಳು ತಮ್ಮ ಅಂತರ್‌ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕು. ಪ್ರಜೆಗಳ ಶಕ್ತಿ ಬಲವಾಗಿದ್ದರೆ ಅವರ ಆಟ ಏನೂ ನಡೆಯುವುದಿಲ್ಲ" ಎಂದರು. ಬಹಳ ಮೆತ್ತಗೆ ಮಾತನಾಡುತ್ತಾರೆ. ನಾವು ಪಕ್ಕದಲ್ಲೇ ಒಂದು ಅಡಿ ಸಹ ಇರಲಿಲ್ಲ. ಇಷ್ಟು ಸಮೀಪವಿದ್ದರೂ ಕಿವಿಚಾಚಿ ಕೇಳಬೇಕಾಗಿತ್ತು. ಬರುವಾಗ ಇಬ್ಬರೂ ಕಾಲು ಮುಟ್ಟಿ ನಮಸ್ಕಾರಮಾಡಿ ಬಂದೆವು.

ಅದೂ ಒಂದು ಮಠ. ಗಾಂಧೀಜಿ ಎದುರು ಕಾಲುಮಣೆ. ಒಂದು ಕಬ್ಬಿಣದ ಡಬರಿ (ಪ್ರಾಯಶಃ ಉಗುಳಲಿಕ್ಕೋ ಅಥವ ಹರಕು ಕಾಗದ ಹಾಕಲಿಕ್ಕೋ) ಇದೆ. ಹೊರಗೆ ಟೆಲಿಫೋನ್, ಮಂಚ, ಕುರ್ಚಿ ಎಲ್ಲ ಸೌಕರ್ಯಗಳಿವೆ. ಪಕ್ಕದಲ್ಲಿ ಗಾಂಧೀಜಿಯವರಿಗೆ ಹಾಲು ಒದಗಿಸಲು ಆಡುಗಳು. ಆಶ್ರಮದ ಕೆಲವು ಹೆಂಗಸರು ನಿನ್ನ ಹಾಗೆ ಮಂಚದ ಮೇಲೆ ಒರಗಿಕೊಂಡು ಉಲ್ಲನ್ ಹೆಣೆಯುತ್ತ ಇದ್ದರು.

೪-೧೫ಕ್ಕೆ ಸರಿಯಾಗಿ ನಮ್ಮ ಭೇಟಿ ಮುಗಿಯಿತು. ನಾವು ಹೊರಗೆ ಬರುವವರಲ್ಲೇ ತಿರುವಾಂಕೂರಿನ ವರ್ಗೀಸರು ಕಾದಿದ್ದರು. ಹೀಗೆಯೇ ಭೇಟಿಮಾಡುವವರ ತಂಡ. ಗೇಟ್ ಬಳಿ ಬಂದಾಗ ಇಬ್ಬರು

ಯುರೋಪಿಯನ್ ದಂಪತಿಗಳು. ಇಂದು ಗಾಂಧೀಜಿ ಒಂದು ವ್ಯಕ್ತಿಯಲ್ಲ— ಒಂದು ವಿಶ್ವ ಸಂಸ್ಥೆ. ಭಂಗಿಯಿಂದ ಮೊದಲುಗೊಂಡು ಬಲ್ಲಿದರವರೆಗೂ ಎಲ್ಲರೂ ಅವರ ದರ್ಶನಕ್ಕೆ, ಉಪದೇಶಕ್ಕೆ, ಮಾರ್ಗದರ್ಶಿತ್ವಕ್ಕೆ ಕಾದಿರುತ್ತಾರೆ. ಕಾಲಚಕ್ರದಂತೆ ಎಲ್ಲಕ್ಕೂ ಒಂದು ನಿಯಮ, ಒಂದು ಮಿತಿ.

ನೆನ್ನೆ ಮಧ್ಯಾಹ್ನ ಶ್ರೀ ಕೇಶವನ್ ಎಂದು ಮೈಸೂರಿನವರು ಒಬ್ಬರು ಸೆಕ್ರೆಟೇರಿಯಟ್ ಲೈಬ್ರರಿಯಲ್ಲಿದ್ದಾರೆ. ಅವರ ಸಂಗಡ ಊಟ ಮಾಡಿದೆ; ಆಗ್ಗೆ ವೆಂಕಟದೇಶಿಕಾಚಾರ್ಯರೂ ಬಂದಿದ್ದರು. ಶಿವಮೊಗ್ಗೆಯಲ್ಲಿ ಈಗ ಹೆಲ್ತ್ ಆಫೀಸರರಾಗಿರುವ ಡಾಕ್ಟರ್ ಶಾಸ್ತ್ರಿಗಳ ಸಂಬಂಧೀಕರಾದ ಶ್ರೀ ಲಕ್ಷ್ಮೀಪತಿಯವರು ಮತ್ತು ಮೈಸೂರಿನ ಇನ್ನೊಬ್ಬ ಶ್ರೀನಿವಾಸಾ ಚಾರ್ಯರ ದರ್ಶನವೂ ಆಯಿತು. ಶ್ರೀ ಕೇಶವನ್ ಮೈಸೂರು ಕಾಲೇಜಿನಲ್ಲಿ ಲೆಕ್ಚರರ್ ಆಗಿದ್ದರು. ಈಗ ಇಲ್ಲಿ ೮೦೦-೯೦೦ ರೂ. ಸಂಬಳ. ಮೈಸೂರಿ ನವರೆಂದರೆ ಪ್ರಾಣ. "ನಿಮ್ಮ ಹೆಸರು ಮಾತ್ರ ಕೇಳಿದ್ದೆ. ನೀವಾಗಿ ಬಂದು ಪರಿಚಯಮಾಡಿಕೊಂಡು ಉಪಕಾರ ಮಾಡಿದಿರಿ—ಇದು ಒಂದು ದೊಡ್ಡ ದಿನ" ಎಂದರು. ನನ್ನ ಯೋಗ್ಯತೆ ಏನು, ಅವರ ಔದಾರ್ಯವೇನು ಎಂದುಕೊಂಡೆ. ಇಲ್ಲಿಯೂ ಒಂದು ಕರ್ನಾಟಕ ಸಂಘವಿದೆಯಂತೆ. ಅದಕ್ಕೆ ಅವರೊಬ್ಬ ಉಪಾಧ್ಯಕ್ಷರು. ಅದರಲ್ಲಿ ಕನ್ನಡದ ಗಂಧವಿಲ್ಲದ ತಮಿಳರು ತೆಲುಗರೂ ಇದ್ದಾರೆ. ಉತ್ತರ ದೇಶಕ್ಕೆ ಬಂದರೆ ನೆರೆಯುವ ರಾದ ತಮಿಳು, ಕನ್ನಡ, ತೆಲುಗು ಮುಂತಾಗಿ ಎಲ್ಲರೂ ಒಂದಾಗುತ್ತಾರೆ. ಕರ್ನಾಟಕ ಸಂಘಕ್ಕೆ ಒಂದು ದಿನ ಬರಬೇಕೆಂದರು.

ಈ ಸಲದ ಸಭೆಯು ಈ ತಿಂಗಳು ಆಖೈರು ಎಂದರೆ ೩ಿಗಕ್ಕೆ ಮುಗಿಯುತ್ತದೆ. ಪುನಃ ೧೫ಕ್ಕೆ ಸೇರುತ್ತದೆ. ಅಂದು ಬ್ರಿಟಿಷ್ ವೈಸರಾಯರು ಭಾರತೀಯರಿಗೆ ಅಧಿಕಾರ ವಹಿಸುವ ದಿನ. ರಾಷ್ಟ್ರ ವಿದಾನ ಸಭೆಗೆ ಗಾಂಧೀಜಿಯವರನ್ನು ಆಹ್ವಾನಿಸಬೇಕೆಂದು ಎಲ್ಲ ಸದಸ್ಯರೂ ಸಹಿಮಾಡಿ ಅಧ್ಯಕ್ಷ ರಾಜೇಂದ್ರ ಪ್ರಸಾದರಿಗೆ ಒಂದು ಅರ್ಜಿ ಕೊಟ್ಟಿದ್ದೇವೆ. ಆದರೂ ಮುದುಕಪ್ಪ ಬರದೇ ಇದ್ದರೂ ಇರಬಹುದು.

ನೋಡಬೇಕು. ನಾನು ೧ನೇ ತಾರೀಖು ಹೊರಟು ಮುಂಬೈ ಮಾರ್ಗ ವಾಗಿ ಮೂರನೆ ಸಾಯಂಕಾಲ ಶಿವಮೊಗ್ಗಕ್ಕೆ ಬರಬಹುದು. ಮುಂಬೈ ನಲ್ಲಿ ಒಂದು ದಿನವಿದ್ದರೆ ೪ನೇ ತಾರೀಖು ಬರುತ್ತೇನೆ. ಪುನಃ ೧೧-೧೨ಕ್ಕೆ ಹೊರಡಬೇಕು.

೨೫-೭-೧೯೪೭

ನಮ್ಮ ಸಭೆಯಲ್ಲಿ ಚರ್ಚೆ ಯಾವಾಗ ಹೇಗೆ ಉತ್ತಮ ಮಟ್ಟಕ್ಕೆ ಏರುತ್ತೆ ಎಂದು ಹೇಳಲು ಆಗುವುದಿಲ್ಲ. ಈ ದಿನ ಯೂನಿಯನ್ ವಿಷಯಗಳಲ್ಲಿ ಯೂನಿಯನ್ ಸರಕಾರದ ಶಾಸನಗಳನ್ನು ಜಾರಿಗೆ ತರಲು ಅಧಿಕಾರವು ಸಂಸ್ಥಾನಗಳಲ್ಲಿ ರಾಜರಿಗೆ ಅಥವಾ ಅವರ ಸರಕಾರಕ್ಕೆ ಇರಬೇಕೇ ಅಥವಾ ಯೂನಿಯನ್ ಸರಕಾರಕ್ಕೆ ? ಎಂಬುದು ಪ್ರಶ್ನೆ ಇತ್ತು. ದಿವಾನರುಗಳೆಲ್ಲ ರಾಜರುಗಳಿಗೆ ಇರಬೇಕೆಂದು ತಿದ್ದುಪಡೆ ತಂದಿದ್ದರು. ಮೂಲ ನಿರ್ಣಯ—ಯೂನಿಯನ್ ಸರಕಾರ ಬೇರೆ ಏರ್ಪಾಡು ಮಾಡು ವವರೆಗೆ ಸಂಸ್ಥಾನಗಳ ರಾಜರುಗಳಿಗೆ ಇರಬೇಕೆಂದು ಇತ್ತು. ಸಂಸ್ಥಾನ ಗಳ ಶಾಸನ ಸಭೆಗಳ ಒಪ್ಪಿಗೆಯನ್ನು ಪಡೆದು ಅಧಿಕಾರ ಚಲಾಯಿಸ ಬೇಕು ಎಂದು ನಾನು ಒಂದು ತಿದ್ದುಪಡಿ ತಂದಿದ್ದೆ. ದಿವಾನರುಗಳೂ (ಘಟನಾ) ವಿಧಾನ ಸಭೆಯ ಕಾರ್ಯಕರ್ತರುಗಳೂ ಒಂದು ಒಪ್ಪಂದಕ್ಕೆ ಬಂದು "ಅವಶ್ಯಬಿದ್ದಾಗ ಯೂನಿಯನ್ ಸರಕಾರ ಅಧಿಕಾರ ಚಲಾ ಯಿಸಬಹುದು" ಎಂದು ಬೇರೆ ತಿದ್ದುಪಡಿ ತಂದರು. ಒಪ್ಪಿಗೆಯ ನಿರ್ಣಯ ಬಂದದ್ದರಿಂದ ನನ್ನ ತಿದ್ದುಪಡಿಯನ್ನು ಹಿಂದಕ್ಕೆ ತೆಗೆದುಕೊಂಡೆ. ಆಮೇಲೆ ಮೂಲ ನಿರ್ಣಯದ ಮೇಲೆ ಚರ್ಚೆ ಆರಂಭವಾಯಿತು. ಶ್ರೀ ತ್ಯಾಗಿ, ವಿಜಯವರ್ಗೀಯ ಮಾತನಾಡಿದ ಮೇಲೆ ನಾನು ಮಾತನಾಡಿದೆ. "ಇಂತಹ ಮುಖ್ಯ ವಿಷಯಗಳಲ್ಲಿ ಸಂಸ್ಥಾನಗಳ ಪ್ರಜಾಮುಖಂಡರ ಅಭಿಪ್ರಾಯವನ್ನು ಪಡೆದು ನಡೆಯಲು ಅವಕಾಶ ವಿರಬೇಕೆಂದು ನಾನು ತಿದ್ದುಪಡಿ ತಂದಿದ್ದೆ. ದಿವಾನರುಗಳು, ಕಾಂಗ್ರೆಸ್ ಪ್ರಮುಖರೂ ಒಂದು ಉಭಯ ಸಮ್ಮತವಾದ ನಿರ್ಣಯಕ್ಕೆ ಬಂದ ದ್ದರಿಂದ ನನ್ನ ತಿದ್ದುಪಡಿಯನ್ನು ಹಿಂದಕ್ಕೆ ತೆಗೆದುಕೊಂಡೆ. ಈ

ಒಪ್ಪಿತವಾದ ನಿರ್ಣಯದ ಹಿಂದಿನ ಪೂರ್ಣ ಜವಾಬ್ದಾರಿಯನ್ನರಿತು ದಿವಾನರುಗಳು ಇದಕ್ಕೆ ಒಪ್ಪಿದ್ದಾರೆಂದು ನಂಬಿದ್ದೇನೆ. ಫೆಡರಲ್ ಶಾಸನ ಸಭೆಗೆ ವಯಸ್ಕರ ಮತದಾನದ ಮೂಲಕ ಚುನಾವಣೆಗೆ ಒಪ್ಪಿರುವುದೂ, ಮೂಲಭೂತ ಹಕ್ಕುಗಳನ್ನು ಒಪ್ಪುವದೂ, ನಾಗರಿಕ ಸ್ವಾತಂತ್ರ್ಯವನ್ನು ಒಪ್ಪಿರುವುದೂ ಎಲ್ಲ ಸಂಸ್ಥಾನಗಳ ಮೇಲೆ ಪರಿಣಾಮ ಮಾಡಲೇ ಬೇಕು. ಸಂಸ್ಥಾನದ ಪ್ರಜೆಗಳಾದ ನಾವು ಒಂದು ಇಕ್ಕಟ್ಟಿನಲ್ಲಿದ್ದೇವೆ. ಭಾರತದ ಒಗ್ಗಟ್ಟು ಮತ್ತು ಶಕ್ತಿಯನ್ನು ಮುರಿಯುವ ಯಾವ ಕಾರ್ಯವನ್ನೂ ಮಾಡಲು ಇಷ್ಟವಿಲ್ಲ. ಜತೆಗೆ ಸಂಸ್ಥಾನಗಳ ಪ್ರಜೆಗಳ ಹಕ್ಕುಬಾಧ್ಯತೆಗಳನ್ನು ಕಾಪಾಡಬೇಕಾಗಿದೆ. ಯೂನಿಯನ್ ಸರಕಾರದಲ್ಲಿ ಸೇರುವುದೆಂದರೆ ಕನಿಷ್ಠಾಂಶ ಪ್ರಜಾಪ್ರಭುತ್ವವಾದರೂ ಸಂಸ್ಥಾನಗಳಲ್ಲಿ ನೆಲಸಬೇಕು. ಈ ಕಾಲಧರ್ಮವನ್ನರಿತ ಸಂಸ್ಥಾನಗಳ ಆಡಳಿತದ ಗುರುತರ ಜವಾಬ್ದಾರಿಯನ್ನು ಹೊತ್ತಿರುವ ದಿವಾನರುಗಳು ರಾಜರುಗಳಿಗೆ ಮಾತ್ರವಲ್ಲದೇ ಸಂಸ್ಥಾನಗಳ ಪ್ರಜೆಗಳಿಗೆ ಮತ್ತು ಯೂನಿಯನ್ ಸರಕಾರಕ್ಕೆ ತಾವು ಸಲ್ಲಿಸಬೇಕಾದ ತಮ್ಮ ಜವಾಬ್ದಾರಿಯನ್ನು ಅರಿತು, ಸಂಸ್ಥಾನಗಳಲ್ಲಿ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಿ ಹೊಸ ಯುಗವನ್ನು ಆರಂಭಿಸುತ್ತಾರೆಂದು ತಿದ್ದುಪಡಿಯಾದ ನಿರ್ಣಯವನ್ನು ಅನುಮೋದಿಸುತ್ತೇನೆ ಎಂದು ಹೇಳಿದೆ. ಕೂಡಲೆ ದಿವಾನ್ ರಾಮಸ್ವಾಮಿ ಮೊದಲಿಯಾರರು ಎದ್ದು, "ಸಂಸ್ಥಾನಗಳೂ ಮುಂದುವರಿಯುತ್ತಿವೆ. ಕಾಲಧರ್ಮಕ್ಕನುಸಾರವಾಗಿ ಸುಧಾರಣೆಗಳು ಬಂದೇ ಬರುತ್ತವೆ. ಆದರೆ ಯೂನಿಯನ್ ಸರಕಾರದ ಅಧಿಕಾರ ಚಲಾಯಿಸುವ ಹಕ್ಕು ಸಂಸ್ಥಾನಗಳಿಗೇ ಇರಬೇಕು. ತೀರ ಅವಶ್ಯವೆಂದಾಗ ಮಾತ್ರ ಯೂನಿಯನ್ ಸರಕಾರಕ್ಕಿರಬೇಕು" ಎಂದರು. ಸರಿ, ಕೂಡಲೆ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್, ಸಂತಾನಮ್, ಗೋಪಾಲಸ್ವಾಮಿ ಅಯಂಗಾರ್, ಆಣೆ ಮುಂತಾದವರೆಲ್ಲ ರಾಮಸ್ವಾಮಿ ಮೊದಲಿಯಾರರನ್ನು ಬಲಿಹಾಕಿದರು. ಹೊರಗೆ ಬಂದಾಗ ಅಲ್ಲಾಡಿಯವರು ನಿಜಲಿಂಗಪ್ಪನ ಎದುರು "ಮೈಸೂರಿನವರು ನೀವು ಬಹಳ ಚೆನ್ನಾಗಿ ಮಾತನಾಡುತ್ತೀರಿ.

ನಿಮ್ಮಷ್ಟೇ ನನಗೂ ಚೆನ್ನಾಗಿ ಮಾತನಾಡಬೇಕೆನಿಸುತ್ತದೆ" ಎಂದರು. ದಿವಾನರು ಯಾರ ಹತ್ತಿರವೋ "ನಿಜಲಿಂಗಪ್ಪನವರಿಗೆ ನೋಡಿ, ನಾನು ದೇಶಪ್ರೇಮಿಯಲ್ಲ ಎಂತ ಇವರು ತಿಳಿದುಕೊಂಡಿದ್ದಾರೆ" ಎಂದರಂತೆ. ಅಂತೂ ಒಳ್ಳೆಯ ಚರ್ಚೆ. ನಾನೂ ಭಾಗವಹಿಸಿದ್ದೆ. ಎಲ್ಲರೂ 'ಭೇಷ್' ಎಂದರು. ಅಷ್ಟೇ ಸಂತೋಷ.

೨೬-೭-೧೯೪೭

ಈ ದಿನ ಮಧ್ಯಾಹ್ನ ನಿನಗೆ ಒಂದು ಕಾರ್ಡು ಬರೆದಿದ್ದೇನೆ. ಅದರಲ್ಲಿ ಸಂಜೆ ೫ ಗಂಟೆಗೆ ಡಾಕ್ಟರ್ ಷರಿಯಾರ್ ಒಂದು ಭಾಷಣ ಮಾಡುತ್ತಾರೆ ಎಂದು ಬರೆದಿದ್ದೆ. ಡಾಕ್ಟರ್ ಷರಿಯಾರ್ ಇಂಡೋನೇಷ್ಯದಲ್ಲಿ ಮುಖ್ಯ ಮಂತ್ರಿಯಾಗಿದ್ದ. ಅಲ್ಲಿ ಡಚ್ಚರು (ಹಾಲೆಂಡ್ ಜನ) ಯುದ್ಧ ಹೂಡಿದ್ದಾರೆ. ಯುದ್ಧ ಹೂಡಿದ ರಾತ್ರಿಯೇ ಕ್ಯಾಪ್ಟನ್ ಪಾಟ್ನಾಯಕ್ ಎಂಬುವವರು ವಿಮಾನದಲ್ಲಿ ಇಂಡಿಯಾಕ್ಕೆ ಹೊರಡುವುದರಲ್ಲಿದ್ದರು. ಆ ಅವಕಾಶ ಉಪಯೋಗಿಸಿಕೊಂಡು ಇಂಡೋನೇಷಿಯನ್ನರ ಸಹಾಯಕ್ಕೆ ಇಂಡಿಯ ಮತ್ತು ಪ್ರಪಂಚದ ಇತರ ರಾಷ್ಟ್ರಗಳ ನೈತಿಕ ಮತ್ತು ಆರ್ಥಿಕ ಬೆಂಬಲ ಪಡೆಯುವದಕ್ಕೆಂದು ಪಾಟ್ನಾಯಕ್ ಜತೆಗೆ ರಾತ್ರಿಯೇ ಹೊರಟು, ಈಗ ದೆಹಲಿಗೆ ಬಂದಿದ್ದಾರೆ.

ಮುಖ್ಯ ಮಂತ್ರಿಯಾದವನು ಪ್ರಾಯಶಃ ೪೦-೫೦ ವರ್ಷ ಇರಬಹುದು. ಡಚ್ಚರ ಜತೆಗೆ ಹೋರಾಡಿದವನು—ಒಳ್ಳೆಯ ಅಜಾನುಬಾಹು ಸೈನಿಕನಿರಬಹುದು ಎಂದು ಭಾವಿಸಿದ್ದೆ. ಆದರೆ ಕೇವಲ ೩೦-೩೨ ವರ್ಷ ಅಥವಾ ಇನ್ನೂ ಕಮ್ಮಿ ಇರಬಹುದು. ನಮ್ಮ ರಾಮಿಯಷ್ಟು ಅಥವಾ ಇನ್ನೂ ಸ್ವಲ್ಪ ಕುಳ್ಳ. ಮುಖ ದುಂಡು, ಸ್ವಲ್ಪ ಕೆಂಪು. ಭಾಷಣದಲ್ಲಿ ವೈಖರಿ ಏನೂ ಇರಲಿಲ್ಲ. ಬರೆದುಕೊಂಡು ತಂದಿದ್ದ ಹಾಳೆಗಳನ್ನಿಟ್ಟುಕೊಂಡು ಮುಕ್ಕಾಲು ಗಂಟೆ ಮಾತನಾಡಿದ. ಆಚಾರ್ ಕೃಪಲಾನಿ ಅಧ್ಯಕ್ಷತೆ ವಹಿಸಿದ್ದರು. ಸರೋಜಿನಿಯವರು ಡಾಕ್ಟರ್ ಷರಿಯಾರನ್ನು ಏಷ್ಯದ 'ಆಟಂ ಬಾಂಬ್' ಎಂದು ಕರೆದಿದ್ದಾರೆ. ಈ ಸಭೆಗೆ ಜವಹರಲಾಲರ ಸಹೋದರಿ ವಿಜಯಲಕ್ಷ್ಮಿ ಪಂಡಿತರೂ

ಬಂದಿದ್ದರು. ಆಕೆ ಈಗ ರಷ್ಯದಲ್ಲಿ ಭಾರತದ ರಾಯಭಾರಿ. ಭಾರತದ ಮಹಿಳೆಯರಿಗೆ ಎಂತಹ ಗೌರವ! ನಿಮ್ಮಂತಹ ಮುಂದಿನ ಮಹಿಳೆಯರಿಗೆ ಎಂತಹ ಆದರ್ಶ. ಪ್ರಪಂಚದ ಆವ ಬಲಿಷ್ಠ ರಾಷ್ಟ್ರ ಒಂದರಲ್ಲಿ ಭಾರತದ ಮೊದಲನೆಯ ರಾಯಭಾರಿಯಾಗುವುದೆಂದರೆ—ಆದಕ್ಕಿಂತ ಬೇರೆ ಗೌರವ ಏನು ಬೇಕು! ೩೧-೭-೪೭ನೆ ಗುರುವಾರ ಅವರ ಗೌರವಾರ್ಥವಾಗಿ ದೆಹಲಿಯ ನಾಗರಿಕರು ಒಂದು ಸಂತೋಷಕೂಟ ಏರ್ಪಡಿಸಿದ್ದಾರೆ. ನನಗೂ ಕರೆ ಬಂದಿದೆ. ಹೋಗಬೇಕೆಂದು ಮಾಡಿದ್ದೇನೆ—ಹೂವಿನ ಜೊತೆಗೆ ನಾರೂ ಸ್ವರ್ಗಕ್ಕೇರಿದಂತೆ!

ಅಡ್ಡದಾರಿ ಹಿಡಿದೆ. ಪರಿಯರ್ ವಿಷಯ ಬರೆಯುತ್ತಿದ್ದೆ. ಇಂಡೋನೇಷ್ಯದ ಈಗಿನ ಸ್ಥಿತಿ ತಿಳಿದುಕೊಳ್ಳುವ ಮೊದಲು ಅದರ ಚರಿತ್ರೆ ತಿಳಿದುಕೊಳ್ಳುವುದು ಒಳ್ಳೆಯದು. ಇಂಡೋನೇಷಿಯಕ್ಕೂ ಭಾರತಕ್ಕೂ ನಿಕಟ ಸಂಬಂಧವಿದೆ. ಅಶೋಕನ ಕಾಲದಲ್ಲಿ ಬೌದ್ಧ ಸನ್ಯಾಸಿಗಳು ಸಮುದ್ರಗಳನ್ನು ದಾಟಿ ಅಲ್ಲಿ ಬೌದ್ಧವಿಹಾರಗಳನ್ನು ಸ್ಥಾಪಿಸಿದರು. ಆಗ ಬೌದ್ಧಮತವು ಸಿಲೋನ್, ಬರ್ಮ (ಬ್ರಹ್ಮದೇಶ), ಸೈಯಾಂ, ಚೀನಾ, ಜಪಾನ್‌ವರೆಗೂ ಹಬ್ಬಿತ್ತು. ಚೀನಾ ಜಪಾನಿನಿಂದ ಭಾರತಕ್ಕೆ ಬರುತ್ತಿದ್ದ ಮತ್ತು ಇಂಡಿಯದಿಂದ ಚೀನಾಕ್ಕೆ ಹೋಗುತ್ತಿದ್ದ ಬೌದ್ಧ ಸನ್ಯಾಸಿಗಳಿಗೆ ಮಧ್ಯಮಾರ್ಗವಲ್ಲಿ ಇಂಡೋನೇಷ್ಯ ತಂಗಲು ಸ್ಥಳವಾಯಿತು ಬೌದ್ಧಮತ ಖಿಲವಾಗಿ ಪುನಃ ಹಿಂದೂಧರ್ಮವು ಪುನರುತ್ಥಾನವಾದಮೇಲೆ ಅಲ್ಲಿಗೆ ವೈದಿಕ ಮತವೂ ಹೋಗಿ, ಅಲ್ಲಿ ಹಿಂದೂ ರಾಜರು ರಾಜ್ಯ ಕಟ್ಟಿದರು. ದೇವಾಲಯಗಳನ್ನು ಕಟ್ಟಿದರು. ಬಾಲಿ, ಜಾವಾ, ಸುಮಾತ್ರಾ ದ್ವೀಪಗಳಲ್ಲಿ ದೊಡ್ಡ ದೊಡ್ಡ ಹಿಂದೂ ದೇವಾಲಯಗಳಿವೆ, ಬೌದ್ಧವಿಹಾರಗಳಿವೆ. ರಾಮಾಯಣ, ಮಹಾಭಾರತದ ಕಲ್ಲುಕೆತ್ತನೆಗಳಿವೆ. ದೊಡ್ಡ ದೊಡ್ಡ ಸಮಾರಂಭಗಳಲ್ಲಿ ಈಗಲೂ ಅಲ್ಲಿ ಸಂಸ್ಕೃತ ಶ್ಲೋಕಗಳ ಪ್ರಾರ್ಥನೆಯಿಂದ ಕಾರ್ಯಕ್ರಮ ಮೊದಲು ಮಾಡುತ್ತಾರೆ. ಬೌದ್ಧ ರಾಜರುಗಳಲ್ಲಿ ಶ್ರೀವಿಜಯ ಬಹು ಪ್ರಸಿದ್ಧನಾದವನು. ಅವನ ಸಂತತಿಯು ನಾಶವಾದದ್ದು ದಕ್ಷಿಣ

ಇಂಡಿಯದ ಚೋಳರಾಜನಿಂದ. ಆಮೇಲೆ ಕೆಲವರು ಮುಸಲ್ಮಾನರು ಅಲ್ಲಿ ನೆಲಸಿ ರಾಜ್ಯವಾಳಿದರು. ಆದರೆ ಬಹುಕಾಲ ಆಳಲಿಲ್ಲ. ಅಷ್ಟರಲ್ಲೇ ಯೂರೋಪಿನಿಂದ ಹಾಲೆಂಡಿನ—ಡಚ್ಚರು ವ್ಯಾಪಾರಕ್ಕೆಂದು ಹೋಗಿ ಒಂದು ಕೈಲಿ ಬಂದೂಕು, ಇನ್ನೊಂದು ಕೈಲಿ ಬೈಬಲ್ ಮತ್ತು ತಕ್ಕಡಿ ತೆಗೆದುಕೊಂಡು ಇಂಡೋನೇಷ್ಯ ಗೆದ್ದರು. ಇಂಡಿಯ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ಮುಸಲ್ಮಾನರ ಅಧೀನವಾದರೂ ಸಾವಿರಾರು ವರ್ಷಗಳಕಾಲ ಇಂಡೋನೇಷ್ಯದಲ್ಲಿ ಹಿಂದೂ ಧರ್ಮವು ಅವಿಚ್ಛಿನ್ನವಾಗಿ ಬೆಳೆದು ಬಾಳಿತು. ಅಲ್ಲಿನ ದೇವಾಲಯಗಳು ಈಗಲೂ ಅಚ್ಚರಿಯನ್ನುಂಟುಮಾಡುತ್ತಿವೆಯಂತೆ! ಡಚ್ಚರು ಇಂಡೋನೇಷ್ಯ ಗೆದ್ದಮೇಲೆ ಅಲ್ಲಿಯ ಜನರು ನಮ್ಮಂತೆ ಗುಲಾಮರಾದರು. ಅದರ ಹಿಂದೆಯೇ ಹೇಡಿತನ, ಬಡತನ, ಪರಾವಲಂಬನೆ ಎಲ್ಲ ಬಂದಿತು. ಇಂಡೋನೇಷ್ಯದಲ್ಲಿ ಯುದ್ಧಕ್ಕೆ ಬೇಕಾದ ನಿಕ್ಕಲ್, ಸೀಮೆ ಎಣ್ಣೆ, ತವರ, ರಬ್ಬರ್ ಬೇಕಾದಷ್ಟು ದೊರೆಯುತ್ತವೆ. ಉಷ್ಣವಲಯದಲ್ಲಿರುವದರಿಂದ ಸಾಗುವಾನಿ, ಅಡಿಕೆ, ಭತ್ತ, ಮಸಾಲೆ ಸಾಮಾನು ಹೇರಳವಾಗಿ ದೊರೆಯುತ್ತವೆ. ಸುಮಾರು ೪೦೦-೫೦೦ ದೊಡ್ಡ ಸಣ್ಣ ದ್ವೀಪಗಳಿವೆ. ಬರ್ಮದ ಕೆಳಗಡೆ ಪೂರ್ವಕ್ಕೆ ಶಾಂತ ಸಾಗರದಲ್ಲಿ ನೋಡಿದರೆ ಬರ್ಮಕ್ಕೂ ಆಸ್ಟ್ರೇಲಿಯಕ್ಕೂ ಮಧ್ಯೆ ಆ ಅಸಂಖ್ಯಾತ ದ್ವೀಪಗಳನ್ನು ನೋಡಬಹುದು. ಈ ಯುದ್ಧ ಆರಂಭವಾದೊಡನೆ ಹಿಟ್ಲರ್ ಹಾಲೆಂಡನ್ನು ಕಬಳಿಸಿದ. ರಾಣಿ ವಿಲ್‌ಹೆಲ್ಮಿನಾ ಲಂಗ ಮುದುರಿಕೊಂಡು ಲಂಡನ್ನಿನಲ್ಲಿ ಲಾಟರಿ ಹೊಡೆಯಲಾರಂಭಿಸಿದಳು. ಅಷ್ಟುಹೊತ್ತಿಗೆ ಭಾರತದ ಸ್ವಾತಂತ್ರ್ಯ ಸಂಗ್ರಾಮವು ಏಷ್ಯದಲ್ಲಿ ಗುಲಾಮಗಿರಿಯಲ್ಲಿದ್ದ ಎಲ್ಲ ರಾಷ್ಟ್ರಗಳ ಹೃದಯವನ್ನು ಕಲಕಿತ್ತು. ಕಣ್ಣುಗಳನ್ನು ಕೋರೈಸಿತ್ತು. ಡಾಕ್ಟರ್ ಸೆಕರ್ನೊರವರ ಅಧ್ಯಕ್ಷತೆಯಲ್ಲಿ ಷರಿಯರ್ ಮುಂತಾದ ಯುವಕರು 'ಇಂಡೋನೇಷ್ಯ' ಸ್ವತಂತ್ರವೆಂದು ಸಾರಿದರು. ಹಾಲೆಂಡ್ ರಾಣಿ ತನಗೇ ಮನೆ ಮಠವಿಲ್ಲದೆ ಭಿಕಾರಿಯಾದಾಗ ಇಂಡೋನೇಷಿಯವನ್ನು ಕೇಳುವರಾರು! ಮೇಲುಗಡೆ ಜಪಾನು

ಹಸಿದ ಹುಲಿಯಂತೆ ಬಾಯಿ ತೆರೆದು ಹಲ್ಲು ಕಚ್ಚಿ ಗುರ್ ಎಂದು ಹೊಂಚು ಕಾಯುತ್ತಿತ್ತು. ಇಂಡೋನೇಷಿಯ ಸ್ವಾತಂತ್ರ್ಯ ಸಾರಿತು. ಆದರೆ ಉಳಿಸಿಕೊಳ್ಳಲು ಶಕ್ತಿಯು ಬೇಕಲ್ಲ? ಜಪಾನು ಬಂದು ಒಂದೇ ತುತ್ತಿಗೆ ಗಟಕ್ಕನೆ ಸ್ವಾಹಾ ಮಾಡಿತು. ಜಪಾನಿನ ರಾವಣ ರಾಜ್ಯವನ್ನು ಇಂಡೋನೇಷಿಯನ್ನರು ಕೆಲವು ಕಾಲ ಅನುಭವಿಸಬೇಕಾಯಿತು. ಇಂಡೋನೇಷಿಯನರನ್ನು ಜಪಾನೀಯರು ಮಳೆಗಾಳಿ, ಬಿಸಿಲು ಎನ್ನದೆ ದನಗಳಂತೆ ಮುಳ್ಳುತಂತಿಯ ರೊಪ್ಪಗಳಲ್ಲಿ ಕೂಡಿದರು. ಮನೆಮಠ ಗಳಿಗೆ ಬೆಂಕಿ ನೆಟ್ಟರು. ಹೆಂಗಸರು ಮಕ್ಕಳನ್ನು ಕೊಂದರು. ಆದರೆ ಆ ದುಷ್ಟ ಆಡಳಿತವು ಬಹುಕಾಲ ನಡೆಯಲಿಲ್ಲ. ಜರ್ಮನಿಯು ಸೋತ ಸ್ವಲ್ಪ ದಿನಗಳಲ್ಲಿ ಅಮೇರಿಕನರು ಹಿರೋಷಿಯಾ, ನಾಗಸಾಕಿ ನಗರಗಳ ಮೇಲೆ ಆಟಂ ಬಾಂಬ್ ಹಾಕಿದರು. ಜಪಾನರು ಶರಣಾಗತ ರಾದರು. ಬ್ರಿಟಿಷರು ಅಮೇರಿಕನರು ಜಪಾನರ ಬಳಿ ಇದ್ದ ವಿಮಾನ, ಟ್ಯಾಂಕ್‌ಗಳು, ಹಡಗುಗಳು, ಮೊರ್ಟಾರ್ ಮುಂತಾದ ಯುದ್ಧ ಸಲಕರಣೆಗಳನ್ನು ಕಿತ್ತುಕೊಳ್ಳಲು ಆರಂಭಿಸಿದರು. ಆದರೆ ಜರ್ಮನರು ಸೋತೊಡನೆ ಹಾಲೆಂಡಿಗೆ ಪುನಃ ಬಿಡುಗಡೆಯಾಯಿತು. ತನಗೆ ಬಿಡುಗಡೆಯಾದೊಡನೆ ಬೋನಿನಿಂದ ಹೊರಗೆ ಬಿದ್ದ ಹುಲಿಯಂತೆ ಇಂಡೋನೇಷಿಯಾದ ಮೇಲೆ ಪುನಃ ತನ್ನ ಸ್ವಾಮ್ಯ ಸ್ಥಾಪಿಸಲು ಯತ್ನ ಮಾಡಿತು. ಇಂಡೋನೇಷಿಯನರು ಅವಕಾಶ ಕೊಡಲಿಲ್ಲ. ಅಲ್ಲದೆ ಜಪಾನರು ಸ್ವಲ್ಪ ಶಸ್ತ್ರಾಸ್ತ್ರಗಳನ್ನು ಕೊಟ್ಟಿದ್ದರು. ಇಂಡೋನೇಷಿಯನರ ಕಡೆ ಸೇರಿ ಇಂಡೋನೇಷಿಯ ಸ್ವಾತಂತ್ರ್ಯ ಕಾಪಾಡಲು ಡಚ್ಚರೊಡನೆ ಯುದ್ಧಮಾಡಿದರು. ಕೊನೆಗೆ ಲಿಂಗದಜಾತಿ (ಊರಿನ ಹೆಸರು) ಒಪ್ಪಂದ ಎಂದು ಒಂದು ಒಪ್ಪಂದವಾಯಿತು. ಇಂಡೋನೇಷಿಯನರ ಸ್ವಾತಂತ್ರ್ಯವನ್ನು ಹಾಲೆಂಡ್ ಒಪ್ಪಿತು. ಇಂಡೋನೇಷಿಯಾದ ರಾಜ್ಯಗಳೆಲ್ಲ ಸಂಯುಕ್ತ ರಾಷ್ಟ್ರವಾಗಬೇಕು, ಪೂರ್ಣ ಸ್ವಾತಂತ್ರ್ಯ ವಿರಬೇಕು, ಡಚ್ಚರಿಗೂ ಇಂಡೋನೇಷಿಯರ್ನರಿಗೂ ಸಮಾನತೆ ಇರಬೇಕು ಮುಂತಾಗಿ ಕರಾರುಗಳಿದ್ದವು. ಥರಲ್ಲಿ ಡಚ್ಚರಿಗೂ ಇಂಡೋನೇಷಿಯರ್ನ

ರಿಗೂ ಭಿನ್ನಾಭಿಪ್ರಾಯ ಬಂದರೆ ಆಗ ಇಬ್ಬರೂ ಮೂರು ಜನರ ಪಂಚಾಯಿತರ ತೀರ್ಮಾನದಂತೆ ನಡೆಯಬೇಕು ಎಂದಿದೆ. ಒಬ್ಬರು ಡಚ್ಚರಿಂದ ನೇಮಕವಾದವರು, ಒಬ್ಬರು ಇಂಡೋನೇಷಿಯಾದಿಂದ, ಮೂರನೆಯವರು ಅಂತರ ರಾಷ್ಟ್ರೀಯ ನ್ಯಾಯಾಸ್ಥಾನದ ಜಡ್ಜರು. ಈ ಷರತ್ತಿದ್ದರೂ ಎಲ್ಲ ಸಾಮ್ರಾಜ್ಯವಾದಿಗಳಂತೆ ಡಚ್ಚರು ಶಾಂತಿಭಂಗದ ಹೆಸರಿನಲ್ಲಿ ಹೇಳದೆ ಕೇಳದೆ ಇಂಡೋನೇಷಿಯರ್ನರ ಮೇಲೆ ಯುದ್ಧ ಹೂಡಿದ್ದಾರೆ. ಇಂಡೋನೇಷಿಯರ್ನರಲ್ಲಿ ವಿಮಾನಗಳಿಲ್ಲ, ಹಡಗು ಗಳಿಲ್ಲ, ಟ್ಯಾಂಕ್‌ಗಳಿಲ್ಲ, ಆಧುನಿಕ ಶಸ್ತ್ರಾಸ್ತ್ರಗಳಿಲ್ಲ. ಆದ್ದರಿಂದ ಪ್ರಪಂಚದ ಇತರ ರಾಷ್ಟ್ರಗಳ ಸಹಾಯ ಕೇಳಲು ಷರಿಯರ್ ಇಲ್ಲಿಗೆ ಬಂದಿದ್ದಾನೆ. ಇದೇ ಇಂಡೋನೇಷಿಯಾ ಕತೆ. ಕೊನೆಯಲ್ಲಿ ಆಚಾರ್ಯ ಕೃಪಲಾನಿಯವರು "ನಮ್ಮಲ್ಲಿ ಬೆಳ್ಳಿ ಬಂಗಾರವಿಲ್ಲ, ಶಸ್ತ್ರಾಸ್ತ್ರಗಳು ಇಲ್ಲ. ಆದರೆ ನೈತಿಕ ಬಲವಿದೆ. ನೈತಿಕ ಬಲವು ಗುಂಡು ಮದ್ದು ಗಳಿಗಿಂತ ದೊಡ್ಡದು. ಭಾರತದ ಪ್ರತಿನಿಧಿಗಳು ತಮ್ಮ ನೈತಿಕ ಬಲವನ್ನೆಲ್ಲ ನಿಮ್ಮ ಸಹಾಯಕ್ಕಾಗಿ ಉಪಯೋಗಿಸುತ್ತಾರೆಂದು ನಂಬಿದ್ದೇನೆ. ಇದೇ ದೆಹಲಿ ನಗರದಲ್ಲಿ ಅನೇಕ ಸಾಮ್ರಾಜ್ಯಶಕ್ತಿಗಳು ಆಳಿ ಅಳಿದಿವೆ. ಅವರೆಲ್ಲರೂ ಲೂಟಿ, ಕೊಲೆ ಮಾಡಿದರು. ಆದರೆ ಲೂಟಿ, ಕೊಲೆ ಮಾಡಿದವರಲ್ಲಿ ಕೊಲೆಗೀಡಾದವರ ಹಿತಕ್ಕಾಗಿಯೇ ಕೊಲೆ ಮಾಡುವುದು ಎಂದು ಹೇಳಿದ್ದು ಕ್ರಿಶ್ಚಿಯನ್ ಸಾಮ್ರಾಜ್ಯವಾದಿಗಳು ಮಾತ್ರ! ಎಲ್ಲ ಸಾಮ್ರಾಜ್ಯಗಳಂತೆ ನಿಮ್ಮ ಮೇಲಿನ ಸಾಮ್ರಾಜ್ಯ ಶಕ್ತಿಯೂ ನಾಶವಾಗುತ್ತದೆ. ಪ್ರಾಯಶಃ ನೀವು ನಾವು ಎಣಿಸುವುದಕ್ಕೆ ಮುಂಚೆಯೇ ನಾಶವಾಗುತ್ತೆ. ನಿಮಗೆ ಜಯವಾಗಲಿ" ಎಂದರು. ಸಭೆ ಮುಕ್ತಾಯವಾಯಿತು.

ಲಿಂಗದಜಾತಿ, ಜೋಗ್ಯಕರ್ತ (ಯೋಗ್ಯಕರ್ತ ಇರಬೇಕು), ಇಂದ್ರಮಾಜು, ಗುಣಂಗಜಾತಿ (ಗುಣಯತಿ) ಈ ಹೆಸರುಗಳೇ ಭಾರತೀಯ ಮೂಲವನ್ನು ಸಾರುತ್ತವೆ.

ವಿಜಯಲಕ್ಷ್ಮಿ ಪಂಡಿತರು ಬಂದಿದ್ದರು ಎಂದು ಹೇಳಿದೆ. ಬಿಳಿಯ ಖಾದಿ ಸೀರೆ ಉಟ್ಟಿದ್ದರು. ಕೂದಲು ಆಗಲೇ ಬಿಳಿತು

ಹೋಗಿದೆ. ಜವಹರಲಾಲರ ಹಾಗೇನೆ ಇದ್ದಾರೆ. ಆದರೆ ಭಾರತೀಯ ಮಹಿಳೆಯರಿಗೆ ಸಹಜವಾದ ನಯ, ಲಜ್ಜೆ, ಚಟುವಟಿಕೆ ಇವೆ. ಒಳ್ಳೆಯ ಸ್ಫುರದ್ರೂಪಿ. ಎತ್ತರವಾಗಿ, ತೆಳ್ಳಗೆ ಲಕ್ಷಣವಾಗಿದ್ದಾರೆ. ಗಾಳಿಯಲ್ಲಿ ತೇಲಿದಂತೆ ನಡಿಗೆ.

ನಾಳೆ ಇನ್ನೊಂದು ಕಾಗದ. ನಾಳಿನ ಕಾಗದ ಪ್ರಾಯಶಃ ಬೇರೆ ತರಹದ್ದಾಗಬಹುದು. ನನ್ನ ಹಲವು ಆಂತರಿಕ ವಿಷಯಗಳನ್ನು ನಿನಗೆ ಬರೆಯೋಣವೆ ಬೇಡವೆ ಎಂದು ಯೋಚಿಸುತ್ತಿದ್ದೇನೆ. ಆತ್ಮಪ್ರೇರಣೆ ಕೊನೆಗೆ ಹೇಗೆ ಆಗುತ್ತೊ ಹಾಗೆ ಮಾಡಬೇಕೆಂದಿದ್ದೇನೆ.

೨೯-೭-೪೭

ನೀನೂ, ಶಾಂತೂ, ಸುಂದ್ರು, ಚಂದ್ರು ಎಲ್ಲರೂ ಬರೆದ ಕಾಗದಗಳೂ ಬಂದವು. ನಿನಗೆ ಕಾಗದ ಬರೆಯಲಿಲ್ಲ ಎಂದು ತರಲೆ ಮಾಡಿದ್ದೀಯ. "ತರಲೆ ಮಾಡುತ್ತಾನೆ" ಎಂದು ಶಾಂತು ಸುಂದ್ರು ಸಹ ಬರೆದು ತಿಳಿಸಿರುತ್ತಾರೆ. ಆದ್ದರಿಂದ ಈ ಕಾಗದ ನಿನಗೇನೆ ಬರೆಯುತ್ತ ಇದ್ದೇನೆ. ಬೈಸಿಕಲ್ಲು, ಏರೋಪ್ಲೇನ್ ರೈಲಿನಲ್ಲಿ ತರಲು ಆಗುವುದಿಲ್ಲ. ನಮ್ಮ ರಾಜುಗೆ ಬೇಕು. ಬರೆದಿದ್ದಾನೆ, ಊರಿಗೆ ಹೋದಮೇಲೆ ತಂಟೆ ಮಾಡುತ್ತಾನೆ ಎಂದರೂ ರೈಲಿನವರು ನಿಮ್ಮನ್ನೇ ಕರೆದುಕೊಂಡು ಹೋಗುವುದಿಲ್ಲ ಎಂದರು. ಆದ್ದರಿಂದ ಅದನ್ನೆಲ್ಲ ತರಲು ಆಗುವುದಿಲ್ಲ. ನಾನು ೨ನೆಯ ತಾರೀಖು ಶನಿವಾರ ಇಲ್ಲಿಂದ ಹೊರಟು ೫ನೆ ತಾರೀಖು ಮಂಗಳವಾರ ಬೆಳಗ್ಗೆ ರೈಲಿನಲ್ಲಿ ಶಿವಮೊಗ್ಗಕ್ಕೆ ಬರುತ್ತೇನೆ. ೪-೫ ದಿನ ಮಾತ್ರ ಊರಿನಲ್ಲಿದ್ದು ಮತ್ತೆ ಹೊರಡಬೇಕು. "ಆಗ್ರಾಕ್ಕೆ ಹೋಗು, ವಿಜೂನ್ನ ಕರೆದುಕೊಂಡು ಬಾ" ಎಂದು ಬರೆದಿರುತ್ತಿ. ಬಹಳ ಬುದ್ಧಿವಂತರು! ನೀವು ಯಾರೂ ಅವರ ವಿಳಾಸವನ್ನು ಬರೆದಿಲ್ಲ. ಆಗ್ರಾಕ್ಕೆ ಹೋಗುವುದಕ್ಕೆ ಆಗುವುದಿಲ್ಲ. ನಾನು ಈಗ ಹೊರಡುವ ದಾರಿ ಮಥುರೆ (ಶ್ರೀಕೃಷ್ಣ ಹುಟ್ಟಿದ ಸ್ಥಳ). ಬರೋಡ, ಸೂರತ್ ಮಾರ್ಗವಾಗಿ ಬೊಂಬಾಯಿಗೆ ಹೋಗುತ್ತದೆ.

ಅಡ್ರಸ್ ಕೊಟ್ಟಿದ್ದರೆ ಶ್ರೀ ಕೃಷ್ಣಮೂರ್ತಿಗಳ ಮಗನಿಗೆ ಮಥುರಾ ದಲ್ಲಿ ಬಂದು ನೋಡಲು ಬರೆಯಬಹುದಾಗಿತ್ತು. ಇಷ್ಟೇ ನಿನ್ನ ಜಾಣತನ !

ನಿನ್ನೆ ಹಳೇ ಡೆಲ್ಲಿಗೆ ಹೋಗಿದ್ದೆ. ಹಳೇ ದೆಹಲಿ ಸುತ್ತಲೂ ಕೋಟೆ ಇದೆ. ೧೨ ಬಾಗಿಲುಗಳಿವೆ. ಅಜ್ಮೀರಿ ಗೇಟ್, ದೆಹಲಿ ಗೇಟ್, ಕಾಶ್ಮೀರಿ ಗೇಟ್ ಎಂತ ಬೇರೆ ಬೇರೆ ಹೆಸರು. ಕೋಟೆ ಸುತ್ತಳತೆ ೩ ಚದರ ಮೈಲಿ. ಒಳಗೆ ಜನಸಂದಣಿ ಬಹಳ ಹೆಚ್ಚು. ಕೊಳೆ, ಕೊಚ್ಚೆ ಬಹಳ. ಅಲ್ಲಿ ಜುಮ್ಮಾ ಮಸೀದಿಗೆ ಹೋಗಿದ್ದೆ. ಸಾಬರು ಯಾರೂ ಚೂರಿ ಹಾಕಲಿಲ್ಲ. ಈಗ ಎಲ್ಲ ತಣ್ಣಗಾಗಿದೆ. ಬಹಳ ದೊಡ್ಡ ಮಸೀದಿ. ಒಂದೇ ಸಾರಿ ಸುಮಾರು ೧೫-೨೦ ಸಾವಿರ ಜನ ಕುಳಿತು ಪ್ರಾರ್ಥನೆ ಮಾಡಬಹುದು. ಕೆಂಪು ಸಾಣೆ ಕಲ್ಲು, ಬಿಳಿ ಸ್ಫಟಿಕದ ಕಲ್ಲಿನಲ್ಲಿ ಕಟ್ಟಿದ್ದಾರೆ. ಸುಮಾರು ೪೦ ಅಡಿ ಎತ್ತರದ ಮೆಟ್ಟಲು ಹತ್ತಿ ಹೋಗಬೇಕು. ಬೂಟ್ಸ್, ಚಪ್ಪಲಿ ಕೈಲಿ ಹಿಡಿದು ಕೊಂಡು ಒಳಗೆ ಹೋಗಬಹುದು. ಕಾಲಿಗೆ ಹಾಕಿಕೊಳ್ಳಬಾರದು. ಮೇಲೆ ಹೋಗುತ್ತಲೆ ದೊಡ್ಡ ಪ್ರಾಕಾರ (ಸುತ್ತಲೂ), ಮೂಲೆ ಮೂಲೆ. ಗಳ ಮಧ್ಯದಲ್ಲೂ ಚಚ್ಚೌಕನೆಯ ಗೋಪುರಗಳು. ಪ್ರಾಕಾರದ ಒಳಗೆ ದೊಡ್ಡ ಒಳ ಅಂಗಳ—೧೦ ಸಾವಿರ ಜನ ನಮಾಜಿಗೆ ಕೂಡಬಹುದು. ಮಧ್ಯ ನೀರಿನ ತೊಟ್ಟಿ. ಎಲ್ಲ ಬಿಳಿಯ ಕಲ್ಲಿನಲ್ಲಿ. ಎದುರಿಗೆ ದೊಡ್ಡ ಮಸೀದಿ. ಮೂರು ದೊಡ್ಡ ಗೋಪುರಗಳು. ಮಧ್ಯದ್ದು ಎರಡಕ್ಕೂ ದೊಡ್ಡದು. ದೊಡ್ಡ ಗೋಪುರದ ಮುಂಭಾಗದಲ್ಲಿ ದೊಡ್ಡ ಕಮಾನು ಪುನಃ ಎಲ್ಲವೂ ಬಿಳಿಯ ಕಲ್ಲು. ಮಸೀದಿಯ ಒಳಗೂ ೨-೩ ಸಾವಿರ ಜನ ಕೂಡಬಹುದು. ನಾವು ಹೋದಾಗ ಕುರಾನು ಓದುವವರು ಕೆಲವರು, ನಮಾಜು ಮಾಡುವವರು ಕೆಲವರು. ಬಹಳ ಜನ ಅಡ್ಡಾ ದಿಡ್ಡಿ ಮಲಗಿದ್ದವರು. ಹೊರಗಡೆ ಮೆಟ್ಟಲುವರೆಗೂ ಗುಜರಿ ಅಂಗಡಿ ಗಳು. ಹೋಗಲಿಕ್ಕೆ ದಾರಿ ಬಿಡದಂತೆ ಅಂಗಡಿ. ಮೆಟ್ಟು, ಪಾತ್ರೆ, ಬಟ್ಟೆ, ಮಿಠಾಯಿ, ಕುರಿ, ಚಹ, ಪುಸ್ತಕ ಏನಾದರೂ ಸರಿ.

ಒಂದು ದೊಡ್ಡ ಸಂತೆ. ನೊಣಗಳು ನಮ್ಮನ್ನೇ ತಿನ್ನುವಂತಿದ್ದವು. ಈ ಮಧ್ಯೆ ಟ್ರ್ಯಾಮ್, ಬೈಸಿಕಲ್, ಮೋಟಾರು, ಕುದುರೆಗಾಡಿ, ಎತ್ತಿನ ಗಾಡಿ—ಬದುಕಿ ಬರಬೇಕಾದರೆ ಪುಣ್ಯ ಇರಬೇಕು.

ಆಮೇಲೆ ಗೌರಿಶಂಕರ ದೇವಾಲಯಕ್ಕೆ ಹೋಗಿದ್ದೆ. ಅದೂ ಪುರಾತನವಾದದ್ದು. ಮೇಲೆ ಮೆಟ್ಟಲು ಹತ್ತಿ ಹೋಗಬೇಕು. ರಾಮಕೃಷ್ಣ, ಸೀತಾ, ಅಂಜನೇಯ, ಗೌರೀಶಂಕರ, ಗಣಪತಿ ವಗೈರೆ ದೇವರುಗಳು. ಎಲ್ಲ ಅಮೃತಶಿಲೆಯ ದೇವರುಗಳು. ನೋಡುವದಕ್ಕೆ ಅಷ್ಟು ಮುದ್ದಾಗಿಲ್ಲ. ನಮ್ಮಲ್ಲಿಯ ಪ್ರತಿಮೆಗಳ ಚೆಲುವು, ಸೌಂದರ್ಯ, ನಿಲುವು ಈ ದೇವರುಗಳಿಗೆ ಇಲ್ಲ. ಸದ್ದಾಮುದ್ದಾ ಇವೆ. ಆದರೂ ಜನರ ನೂಕುನುಗ್ಗಲು. ಅಲ್ಲೇ ಪುರಾಣ ಹೇಳುವವರು, ಭಜನೆ ಮಾಡುವವರು, ಕೈ ತೋರಿಸುವವರು, ಜಾತಕ ನೋಡುವವರು. ಅಂತೂ ಸುಲಿಗೆಗಾರರ ಸಂತೆ!

ಆಮೇಲೆ ಒಂದು ಸಿಕ್ಕರ ಗುರುದ್ವಾರಕ್ಕೆ ಹೋಗಿದ್ದೆ. ಸಿಕ್ಕರು ಪ್ರತಿಮೆಗಳನ್ನು ಪೂಜೆಮಾಡುವುದಿಲ್ಲ. ಅಲ್ಲಿ ಜೋಡುಗಳನ್ನು ಇಡುವುದಕ್ಕೆ ಒಳ್ಳೆಯ ಏರ್ಪಾಟು ಮಾಡಿದ್ದಾರೆ. ಒಬ್ಬೊಬ್ಬರಿಗೆ ಒಂದೊಂದು ಗೂಡು. ಅದಕ್ಕೆ ಒಂದು ನಂಬರು. ನಮ್ಮ ಜೋಡುಗಳನ್ನು ಒಂದು ಗೂಡಿನಲ್ಲಿಟ್ಟು ಆ ನಂಬರು ಕೊಡುತ್ತಾನೆ. ಎಲ್ಲರೂ ಜೋಡು ಅಲ್ಲಿಟ್ಟು, ಪಕ್ಕದಲ್ಲಿ ಕಾಲು ಮುಖ ತೊಳೆದುಕೊಂಡು ಒಳಗೆ ಹೋಗಬೇಕು. ಒಳಗೆ ಒಂದು ತೊಟ್ಟಿಲುಹಾಗೆ ಇರುತ್ತೆ. ಅಧರಲ್ಲಿ ರೇಶ್ಮೆ ಬಟ್ಟೆ ಹಾಸಿ ಸಿಕ್ಕರ "ಗ್ರಂಥ"ವನ್ನು ಇಟ್ಟಿರುತ್ತಾರೆ. ಎಲ್ಲರೂ ಪಕ್ಕದಲ್ಲಿ ಕುಳಿತು ಭಜನೆ ಮಾಡುತ್ತಾರೆ. ಇವರಲ್ಲಿ ಒಳ್ಳೆಯ ಶಿಸ್ತು, ಸಂಯಮ ನೋಡಿದೆ. ಗಂಡಸರು ಒಂದು ಕಡೆ, ಹೆಂಗಸರು ಒಂದು ಕಡೆ. ಯಾರೂ ಗಲಭೆ ಮಾಡುವುದಿಲ್ಲ. ಪ್ರತಿಯೊಬ್ಬ ಸಿಕ್ಕನೂ ಸೊಂಟದಲ್ಲಿ 'ಕೃಪಾಣ' ಎಂದು ಒಂದು ಸಣ್ಣ ಕತ್ತಿಯನ್ನು ಇಟ್ಟುಕೊಂಡಿರುತ್ತಾನೆ. ಅದು ಅವರ ಮತಧರ್ಮ. ಅವರು ಗಡ್ಡವನ್ನೂ, ತಲೆಯ ಮೇಲೆ ಜುಟ್ಟನ್ನೂ ಬಿಟ್ಟಿರುತ್ತಾರೆ. ಎಷ್ಟು ದೊಡ್ಡವರೇ ಆದರೂ ಗಡ್ಡ ಬೋಳಿಸುವುದಿಲ್ಲ.

ಜುಟ್ಟು ತೆಗೆಯುವದಿಲ್ಲ. ಗುರುದ್ವಾರದ ಒಳಗೆ ತಲೆಯ ಮೇಲೆ ರುಮಾಲೋ, ಟೋಪಿಯೋ ಕೊನೆಗೆ ಒಂದು ಕೈವಸ್ತ್ರ ಕಟ್ಟಿಕೊಂಡೇ ಹೋಗಬೇಕು. ಒಳಗೆ ಹೋಗಿ ಆ ಗ್ರಂಥಕ್ಕೆ ನಮಸ್ಕಾರ, ಪ್ರದಕ್ಷಿಣೆ ಮಾಡಿ, ಸ್ವಲ್ಪ ಹೊತ್ತು ಕುಳಿತು, ಹೊರಗೆ ಹೋಗುತ್ತಾರೆ. ನಾನೂ ಮಾಡಿದೆ. ಆಮೇಲೆ ಪೇಟೆಗೆ ಹೋಗಿದ್ದೆ.

ಜುಮ್ಮಾ ಮಸೀದಿ ಎದುರಿಗೆ 'ಲಾಲ್‌ಕಿಲ್ಲಾ' ಎಂತ ಮೊಗಲ್ ಚಕ್ರವರ್ತಿಗಳ ಕೋಟೆ ಇದೆ. ಅಲ್ಲಿಗೆ ಒಂದು ದಿನ ಹೋಗಬೇಕು. ಯಮುನಾ ನದಿಗೆ ಹೋಗಿ ಸ್ನಾನ ಮಾಡಬೇಕು. ಆಗುತ್ತೋ ಇಲ್ಲವೋ ನೋಡಬೇಕು.

೩೦-೭-೧೯೪೭

ನಾಳೆ ನಮ್ಮ ಈ ಸಲದ ಅಸೆಂಬ್ಲಿಗೆ ಕೊನೆಯ ದಿನ. ಆಗಲೇ ಎಲ್ಲರೂ ರೈಲಿನಲ್ಲೋ ವಿಮಾನದಲ್ಲೋ ಟಿಕೆಟ್ ತೆಗೆದುಕೊಳ್ಳುತ್ತಲಿದ್ದಾರೆ. ನನ್ನದೂ ಟಿಕೆಟ್ ಬಂದಿದೆ. ದೆಹಲಿಯಿಂದ ಬೊಂಬಾಯಿಗೆ ಸೆಕೆಂಡ್ ಕ್ಲಾಸ್ ೬೭ ರೂ. ಬೊಂಬಾಯಿಯಿಂದ ಆಗಲೇ ಹರಿಹರಕ್ಕೆ ರಿಸರ್‍ವ್ ಮಾಡಿಸಲು ನಿಜಲಿಂಗಪ್ಪ ಕಾಗದ ಬರೆದಿದ್ದಾರೆ. ಆದ್ದರಿಂದ ಮಂತ್ರಾಲಯಕ್ಕೆ ಹೋಗಲು ಆಗುವುದಿಲ್ಲ. ಇನ್ನೊಂದು ಬಾರಿ ಹೋಗುತ್ತೇನೆ. ಹರಿಹರಕ್ಕೆ ಪೂನಾ ಮೇಲ್ ರೈಲು ೪ನೇ ತಾರೀಖು ಸಂಜೆ ೫ ಗಂಟೆಗೇನೆ ಬರುತ್ತೆ. ಕೂಡಲೇ ಯಾವುದಾದರೂ ಬಸ್ ಸಿಕ್ಕರೆ ೪ನೆ ಸಾಯಂಕಾಲವೇ ಹೊರಟು ರಾತ್ರಿಗೆ ಮನೆಗೆ ಬರಬಹುದು. ಆದರೆ ಬಸ್ ವಿಷಯ ಗೊತ್ತಿಲ್ಲ. ಸ್ವಾಮಿಗೆ ಹೇಳಿ ನಗರದ ಸಿ. ಭೀಮಸೇನರಾಯನ್ನು ಕಂಡು ೪ನೆ ಸಾಯಂಕಾಲದ ಬಸ್‌ನಲ್ಲಿ ಒಂದು ಸೀಟು ಇಡಲು ಡ್ರೈವರ್‌ಗೆ ಹೇಳಲು ತಿಳಿಸು. ನೆನ್ನೆ ರಾಜುಗೆ ಬರೆದ ಕಾಗದ ನೀನು ನೋಡಿರಬಹುದು. ನಾಡಿದ್ದು ಪಂಡಿತ್ ಜವಹರಲಾಲ್, ಪಟೇಲ್ ಮತ್ತು ಡಾಕ್ಟರ್ ಪಟ್ಟಾಭಿಯವರನ್ನು ಕಂಡು ಮಾತನಾಡಬೇಕೆಂದು ಇದ್ದೇವೆ. ಆಚೆ ನಾಡಿದ್ದು ೮-೩೦ಗೆ ಬೆಳಿಗ್ಗೆ ರೈಲು ಹತ್ತಬೇಕು. ಆದ್ದರಿಂದ ಬೇರೆ ಎಲ್ಲಿಯೂ ಹೋಗು

ವುದಕ್ಕೆ ಸಾಧ್ಯವಿಲ್ಲ. ನಾಗಪ್ಪ ಸೆಟ್ಟರಿಗಾಗಲಿ, ಮೂರ್ತಿಗಾಗಲಿ ಹೇಳಿ ನನಗೆ ಎರಡು ಖಾದಿ ಪಂಚೆ ತೆಗೆದು ಇಡಲು ಹೇಳು. ಇಲ್ಲಿ ಅಗಸ ನನ್ನದು ಒಂದು ಪಂಚೆ ಕಳೆದ. ಎರಡೇ ಪಂಚೆಯಾದ್ದರಿಂದ ನಿಜಲಿಂಗಪ್ಪನಿಂದ ಒಂದು ತೆಗೆದುಕೊಂಡೆ. ಸುಂದ್ರು, ನೀನು ಎಲ್ಲರೂ ದೆಹಲಿಗೆ ಬರಬೇಕೆಂದು ಬರೆದಿದ್ದೀರಿ. ಖರ್ಚು ಎಷ್ಟಾಗುತ್ತೆ ಗೊತ್ತೇನು? ಅದೂ ಅಲ್ಲದೆ ಇಲ್ಲಿಯ ಹವೆ, ಊಟ ನಿಮ್ಗೆ ಆಗುವುದಿಲ್ಲ. ಬೇರೆ ಮನೆ ಮಾಡಬೇಕೆಂದರೆ ಸಿಗುವುದೂ ಇಲ್ಲ. ಈ ಅಸೆಂಬ್ಲಿ ಮೆಂಬರ್‌ಸಿಪ್ ನನಗೇ ಇನ್ನೂ ೨-೩ ತಿಂಗಳು ಕಾಯಂ ಆಗಲಿ; ಬರುವಿರಂತೆ. ಆ ವೇಳೆಗೆ ಒಂದು ಮನೆ ನೋಡಬಹುದು. ಕೊನೆಗೆ ನಿಜಲಿಂಗಪ್ಪ ಮನೆ ಮಾಡಿದ್ದಾರೆ. ಅದನ್ನೇ ತೆಗೆದುಕೊಳ್ಳ ಬಹುದು. ಮುಂದಿನ ಸಲವೇ ಅವರ ಮನೆಯವರು ಬರುತ್ತಾರೆ. ಆದ್ದರಿಂದ ನಿಮ್ಮ ಅದೃಷ್ಟ ಹೇಗಿದೆಯೋ ನೋಡೋಣ.

ಹಿಂದೆ ನಿನಗೆ ಕಾಗದ ಬರೆದಾಗ ಕೆಲವು ಆಂತರಿಕ ವಿಷಯ ಬರೆಯಬೇಕೆಂದಿದ್ದೇನೆ ಎಂತ ಬರೆದಿದ್ದೆ. ಈಗ ಬರೆಯುತ್ತೇನೆ. ಶೇಷ, ಮಾವ, ರಾಮಣ್ಣ ಎಲ್ಲರೂ ತಮ್ಮ ಕಾಗದದಲ್ಲಿ ಈ ನನ್ನ ಕಾರ್ಯವನ್ನು ಕಂಡು ಯಾವ ವ್ಯಕ್ತಿ ಸುಖ, ಸಂತೋಷ ಪಡೆಯುತ್ತಿದ್ದಳೋ ಅವಳು ಇಲ್ಲವೆಂದು ವ್ಯಸನವಾಯಿತು ಎಂದು ಬರೆದು ಇದ್ದರು. ಪ್ರಾಯಶಃ ನೀವೆಲ್ಲ ಅದೇ ರೀತಿ ದುಃಖಪಟ್ಟಿರಬೇಕು. ನನಗೂ ಒಂದೊಂದು ಬಾರಿ ಕಣ್ಣು ಮಂಜಾಗುತ್ತೆ. ಆದರೆ ಅವಳ ಪಾರ್ಥಿವ ದೇಹ ಹೋಗಿದೆ ಅಷ್ಟೆ. ಆತ್ಮ ನನ್ನ ಬೆನ್ನ ಹಿಂದೆಯೇ ಇರುವಂತೆ ತೋರುತ್ತೆ. ನನಗೆ ಕನಸಿನಲ್ಲಿ ನಂಬಿಕೆ ಇಲ್ಲ. ಕನಸುಗಳು ಹೆಚ್ಚು ಬೀಳುವುದೂ ಇಲ್ಲ. ಆದರೆ ಬಿದ್ದಾಗ ಮಾತ್ರ ಏನೋ ಅರ್ಥವಿರುವಂತೆ ತೋರುತ್ತೆ. ಆ ಅರ್ಥ ನನಗೇನು ಸರಿಯಾಗಿ ಆಗುವುದಿಲ್ಲ. ಡಾಕ್ಟರ್ ನಾರಾಯಣಶಾಸ್ತ್ರಿ 'ಕನಸುಗಳು' ಎಂತ ಒಂದು ಪುಸ್ತಕ ಬರೆದಿರು ತ್ತಾರೆ. ನಿಜ ಹೇಳುವುದಾದರೆ ನಾನು ಓದಿಯೇ ಇಲ್ಲ. ಕೆಲವರು ಅಜೀರ್ಣದಿಂದ ಕನಸುಗಳು ಬೀಳುತ್ತವೆ ಎನ್ನುತ್ತಾರೆ, ಇನ್ನು ಕೆಲವರು

ಯಾವುದನ್ನೋ ಯೋಚಿಸುತ್ತಿದ್ದರೆ, ಅದೇ ಕನಸು ಬೀಳುತ್ತೆ ಎನ್ನುತ್ತಾರೆ. ಆದರೆ ಯಾವ ಯೋಚನೆಯೂ ಇಲ್ಲದೆ ಮಲಗಿದಾಗ ಏಳುವ ಸಮಯಕ್ಕೆ ಕನಸು ಬಿದ್ದರೆ ಅರ್ಥವೇನು?

ಆ ರೀತಿ ನನಗೆ ನಾಲ್ಕು ಕನಸುಗಳು ಬಿದ್ದವು. ಒಂದನೆಯದು ಸಾಯುವುದನ್ನು ನೀನೂ ಕಣ್ಣಾರೆ ನೋಡಿದ್ದೀಯಲ್ಲ. ಹಾಗೇ ನಾನೇ ಸಾಯುವಂತೆ ಕನಸು ಕಂಡೆ. ಉಸಿರು, ನರ, ಎಲ್ಲ ಎಳೆದುಕೊಳ್ಳುವಂತೆ, ಹಾಗೇ ಬೆಚ್ಚಿ ಬಿದ್ದು ಎದ್ದಾಗ ಬದುಕಿದ್ದೆ. ಎರಡನೆಯದು ನಿನ್ನ ತಾಯಿ ಕನಸಿನಲ್ಲಿ ಬಂದಿದ್ದಳು. ಅದೋ ಶುಭ್ರವಾದ ಉಡುಗೆ, ನಗುಮುಖ, ಗಂಡ ಹೆಂಡತಿ ನಾವಿಬ್ಬರೇ ಇದ್ದಾಗ ಹರಟಬಹುದಾದ ಹರಟೆ—ಪುನಃ ಎಚ್ಚರ. ಮೂರನೆ ದಿನ ಎದ್ದಾಗ ಒಂದು ಪ್ರಾರ್ಥನೆ ಹಾಡನ್ನು ಹಾಡುತ್ತಿದ್ದಂತೆ ಕಂಡಿತು. ಜೈಲಿನಲ್ಲಿದ್ದಾಗ "ಬಲ್ಲವನು ನಾನೆಂದು" ಬಹಳ ಹಾಡುತ್ತಿದ್ದೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಮೆರವಣಿಗೆಯಲ್ಲಿ ಬರೆದಿರುತ್ತಾರೆ. ಅದೇ ಹಾಡನ್ನು ಹಾಡುತ್ತ ಪ್ರಾರ್ಥನೆ ಮಾಡುತ್ತಿದ್ದಂತೆ ಎಚ್ಚರವಾಯಿತು. ಳನೆಯ ದಿನ ಪುನಃ ನಿನ್ನ ತಾಯಿ—ಏಕಾಂತದಲ್ಲಿ ನಾವು ಎಷ್ಟು ಸರಸದಿಂದ ಇರಬಹುದೋ ಅಷ್ಟು ಸರಸ—ಪುನಃ ಎಚ್ಚರ. ಈ ಕನಸುಗಳ ಅರ್ಥವೇನು? ದೇವರೇ ಬಲ್ಲ. ಸಾವು ಸದಾ ನಿನ್ನ ಬೆನ್ನ ಹಿಂದೆಯೇ ಇದೆ. ಜೋಕೆ! ಕಾಲಹರಣ ಮಾಡದೆ ನಿನ್ನ ಕೆಲಸ ನೀನು ಮಾಡು ಎಂದಿರಬಹುದೆ? ಹುಳಿ, ಉಪ್ಪುಕಾರ ತಿಂದ ದೇಹ. ಕಾಮಕ್ಕೆ ಎಡೆ ಕೊಡಬೇಡ. ಪ್ರೇಮವೇ ಶಾಶ್ವತ. ನನ್ನ ಕಾಮದೇಹ ಸುಟ್ಟರೂ ಪ್ರೇಮರೂಪಿಯಾಗಿ ನಿನ್ನೊಂದಿಗೆ ಇದ್ದೇನೆ, ಎಂಬ ಅಭಯ ವಿರಬಹುದೇ. ದೇವರಲ್ಲಿ ಭಕ್ತಿಯಿದ್ದರೆ, ನಿಷ್ಕಲ್ಮಷವಾದ ಭಕ್ತಿಯಿಂದ ಮನಃಪೂರ್ವಕ ಪ್ರಾರ್ಥನೆಯಿಂದ ಆಗಬಹುದಾದ ಶುಭ—ಪ್ರಪಂಚದ ಊಹೆಗೆ ಮೀರಿದ್ದು ಎಂದಿರಬಹುದೆ? ನನಗಂತೂ ತಿಳಿಯದು.

ಇಷ್ಟುಮಾತ್ರ ಬಲ್ಲೆ. ಚಂದ್ರು ನಿನ್ನ ತಾಯಿ ನನ್ನೊಂದಿಗೆ ೧೭ ವರ್ಷಕಾಲ ಸಂಸಾರಮಾಡಿದಳು. ನನ್ನ ಕಷ್ಟ ಸುಖಗಳಲ್ಲಿ ಭಾಗಿ

ಯಾದಳು. ಆದರೆ ಒಂದು ದಿನವಾದರೂ ಮನಸ್ಸನ್ನು ಸಣ್ಣಗೆ ಮಾಡಿ ಕೊಂಡಿದ್ದು, ಕೋಪಮಾಡಿದ್ದು, ಹಟಮಾಡಿದ್ದು ನಾನು ಅರಿಯೆ. ದೇವರು ಕೊಟ್ಟದ್ದರಲ್ಲಿ ತೃಪ್ತಳಾಗಿ ನನ್ನ ಸಂತೋಷವೇ ತನ್ನ ಸಂತೋಷ ಎಂದು ನನ್ನ ಜೀವನದಲ್ಲಿ ಭಾಗಿಯಾಗಿ ಸಂಸಾರನೌಕೆ ಯನ್ನು ನಡೆಸಿದಳು. ನಾನು ಇನ್ನೂ ಇಷ್ಟು ಓದಿದ್ದರೆ ಚೆನ್ನಾಗಿತ್ತು ಎಂಬ ಆಸೆ ಬಾಧಿಸುತ್ತಿತ್ತು. ಬೀಗರ ಮನೆಯವರು ಏನೆಂದಾರೋ ಎಂದು ಹೆದರಿ ನನನ್ನು ನಿನ್ನ ಅಜ್ಜಿ ಅಜ್ಜ ಬಿಡಿಸಿದರಂತೆ! ಸ್ವಲ್ಪ ಓದಿದ್ದರೂ ನಿನ್ನ ತಾಯಿಯ ಬುದ್ಧಿ ಬಹಳ ದೊಡ್ಡ ಬುದ್ಧಿ, ಔದಾರ್ಯದ ಬುದ್ಧಿ. ಅವಳು ಮನುಷ್ಯ ಮಾತ್ರದವಳಲ್ಲ ಎಂದು ನನ್ನ ಭಾವನೆ. ಎಲ್ಲೋ ಒಬ್ಬ ದೇವತೆಯಾಗಿದ್ದು ಏನೋ ಶಾಪದಿಂದ ನನ್ನ ಸೆರೆಗೆ ಬಿದ್ದು ಶಾಪ ವಿಮೋಚನೆಯಾದೊಡನೆ ದೇವಸಾನ್ನಿಧ್ಯ ಸೇರಿದಳು. ಆ ಸುಖಮಯ ಸವಿ ಜೀವನದ ನೆನಪು ಇಂದು ನನ್ನ ಸರ್ವಶಕ್ತಿ ಎಂದು ಭಾವಿಸಿರುತ್ತೇನೆ. ದೆಹಲಿಗೂ ಬಂದು ನನ್ನ ಬೆನ್ನುಕಾವಲಾಗಿ, ನೆರಳಾಗಿರಬೇಕಾದರೆ? ಅಂತಹ ತಾಯಿಯ ಮಕ್ಕಳು ನೀವು. ಅವಳ ದೈವಭಕ್ತಿಯೂ ಅಷ್ಟೇ ದೊಡ್ಡದಿತ್ತು. ಯಾವುದರಲ್ಲೂ ತೆಗೆಯುವಂತೆ ಇರಲಿಲ್ಲ. ನೀವು ಆಕೆಯ ಮಕ್ಕಳು. ಬುದ್ಧಿವಂತರಾಗಿ, ಕೀರ್ತಿಶಾಲಿಗಳಾಗಿ, ಸಚ್ಚರಿತ್ರರಾಗಿ ಸುಖವಾಗಿ ಬಾಳಿದರೆ ಅದಕ್ಕಿಂತ ಹೆಚ್ಚು ಸುಖ ನನಗೇನೂ ಬೇಡ. ಗಂಡುಮಕ್ಕಳು ಒಂದು ಮನೆಯನ್ನು ಮಾತ್ರ ಬೆಳಗಿದರೆ, ಹೆಣ್ಣುಮಕ್ಕಳು ತೌರುಮನೆ, ತಂದಮನೆ ಎರಡನ್ನೂ ಬೆಳಗುತ್ತಾರೆ. ದೇವರು ನಿಮ್ಮೆಲ್ಲರನ್ನೂ ಸುಖದಿಂದ ಕಾಪಾಡಲಿ. ಅಷ್ಟೆ ನನ್ನ ಪ್ರಾರ್ಥನೆ.

೧೮-೮-೪೭

ನಾನು ಈ ಹಿಂದೆ ಬರೆದ ಕಾರ್ಡು ತಲ್ಪಿರಬೇಕು. ನಿನಗೆ ಇದು ವರೆಗೆ ದೀರ್ಘವಾದ ಕಾಗದ ಬರೆಯಲು ನನಗೆ ಬಿಡುವೇ ದೊರೆಯಲಿಲ್ಲ. ನನ್ನ ರೂಮಿನಲ್ಲೂ ೩-೪ ಜನ ಇದ್ದರು. ಈ ದಿನ ಸ್ವಾಮಿ ಅವರೆಲ್ಲ ಆಗ್ರಾಕ್ಕೆ ಹೋಗಿದ್ದಾರೆ. ಪ್ರಾಯಶಃ ನಾಡಿದ್ದು ಬೆಳಿಗ್ಗೆ ಇಲ್ಲಿಂದ

ಹೊರಡಬಹುದು. ನಾನು ಬರುವಾಗ ಮುಂಬೈನಲ್ಲಿ ಬಿ. ಎಮ್ ಶ್ರೀನಿವಾಸಯ್ಯ ಎಂತ ಸಿಯೋನಿಯಲ್ಲಿದ್ದಾರೆ. ಅವರ ಮನೆಯಲ್ಲಿ ಇಳಿದಿದ್ದೆವು. ರೈಲಿಗೆ ಕಾರು ತೆಗೆದುಕೊಂಡು ಅವರ ಮ್ಯಾನೇಜರ್ ಬಂದಿದ್ದರು. ಸಿಯೋನಿ ಮುಂಬೈ ರೈಲ್ವೆ ಸ್ಟೇಷನ್ಗೆ ೭ ಮೈಲಿ ಆಗುತ್ತೆ. ಹೋಗುವ ಹೊತ್ತಿಗೆ ಅಡಿಗೆ ಮಾಡಿಸಿದ್ದರು. ಸ್ನಾನ ಮಾಡಿ, ಊಟವಾದ ಮೇಲೆ ಪುನಃ ರೈಲಿಗೆ ಕಾರಿನಲ್ಲಿ ತಂದುಬಿಟ್ಟರು.. ೧೧ ಗಂಟೆಗೆ ಹೋದೆವು. ೨-೩೦ಗೆ ಪುನಃ ಹೊರಟೆ. ಶ್ರೀನಿವಾಸಯ್ಯನವರು ಮುಂಬೈಯಲ್ಲಿ ಸೋಪ್ ಕಾರ್ಖಾನೆ ಇಟ್ಟಿದ್ದಾರೆ. ಅಲ್ಲಿಗೆ ಬಡವರಾಗಿ ಬಂದು ಈಗ ಏನಿಲ್ಲೆಂದರೂ ೪೦-೫೦ ಲಕ್ಷ ಸಂಪಾದಿಸಿರಬೇಕು. ಬೆಂಗಳೂರಲ್ಲಿ ಬಸವನಗುಡಿಯಲ್ಲಿ ಹೊಸದಾಗಿ ಒಂದು ಇಂಜಿನಿಯರಿಂಗ್ ಕಾಲೇಜು ತೆರೆದಿದ್ದಾರೆ. ಒಳ್ಳೆಯ ಉದಾರಿಗಳು. ಮುಂಬೈಗೆ ಯಾರು ಹೋದರೂ ಅವರ ಮನೆಯಲ್ಲಿ ಆತಿಥ್ಯ. ಹಾಗೇನೆ ಇನ್ನೊಬ್ಬರು ಎ. ಎಸ್. ಗುಬ್ಬಿ ಎಂತ ಒಬ್ಬರಿದ್ದಾರೆ. ಅವರು ನಮ್ಮ ಜನವಂತೆ. ಅವರು ಸಹ “ಹೋದ ಸಲ ನಿಮ್ಮ ಭೇಟಿಯಾಗಲಿಲ್ಲ, ಸ್ಟೇಷನ್ಗೆ ನಿಮ್ಮನ್ನು ನೋಡಲು ಬಂದೆ. ಅಷ್ಟು ಹೊತ್ತಿಗೆ ರೈಲು ಹೊರಟುಬಿಟ್ಟಿತ್ತು. ಖಂಡಿತ ಇನ್ನೊಮ್ಮೆ ಬರಬೇಕು” ಎಂದು ಫೋನ್ ಮಾಡಿದರು. ರೈಲು ೨-೩೦ಗೆ ಸರಿಯಾಗಿ ನಾಸಿಕ್‌ಗೆ ಬರುವ ಹೊತ್ತಿಗೆ ಸಂಜೆಯಾಯಿತು. ನಾಸಿಕ್ ಬಳಿ ಗೋದಾವರಿ ಹರಿಯುತ್ತದೆ. ಸಣ್ಣ ಹಳ್ಳ ಇದ್ದಹಾಗೆ ಅದೆ. ಆ ನದಿಗೆ ರಾಜಮಹೇಂದ್ರದ ಬಳಿ ಹಾಕಿರುವ ಸೇತುವೆ ಒಂದೂವರೆ ಮೈಲಿ ಉದ್ದವಿದೆಯಂತೆ! ನಾಸಿಕ್ ವರೆಗೂ ರೈಲು ಬೆಟ್ಟಗುಡ್ಡಗಳ ಮಧ್ಯೆ ಹಾದು ಬರುತ್ತದೆ. ಕಾಡು ಕಣಿವೆಗಳು, ನದಿಗಳು, ಸುರಂಗ ಮಾರ್ಗಗಳು ನೋಡಲು ಬಹು ರಮಣೀಯವಾಗಿವೆ. ಭೂಪಾಲಿಗೆ ಬಂದಾಗ ಬೆಳಿಗ್ಗೆ ೭-೩೦ ಗಂಟೆ. ಭೂಪಾಲ್ ಸಂಸ್ಥಾನಕ್ಕೆ ಬರುವ ಮುಂಚೆ ನರ್ಮದಾ ನದಿ ಸಿಗುತ್ತದೆ. ಭೂಪಾಲ್‌ನಲ್ಲಿ ಇಂದ್ರ, ರಾಮರಾವ್ ಬಂದಿರಲಿಲ್ಲ. ಪ್ರಾಯಶಃ ಕಾಗದ ಸಿಕ್ಕಿತೋ ಇಲ್ಲವೊ? ಅಥವಾ ಬೇರೆ ಕೆಲಸವಿರಬಹುದು.

ಆಗ್ರಾಕ್ಕೆ ಬಂದಾಗ ಮಧ್ಯಾಹ್ನ ಮೂರೂವರೆ ಗಂಟೆ. ಆಗ್ರಾಕ್ಕೆ ಕೆಲವು ಸ್ಟೇಷನ್‌ಗಳ ಹಿಂದೆ ಸೋನಗಿರಿ ಎಂಬ ಸ್ಟೇಷನ್ ಇದೆ. ಅಲ್ಲಿ ಒಂದು ಗುಡ್ಡದ ಮೇಲೆ ಜೈನರ ದೇವಾಲಯಗಳನ್ನು ಕಟ್ಟಿದ್ದಾರೆ. ಪಾಯಶಃ ೨೪ ಇರಬಹುದು. ಒಬ್ಬೊಬ್ಬ ತೀರ್ಥಂಕರರಿಗೆ ಒಂದೊಂದು. ಎಲ್ಲ ಬಿಳಿಯ ಕಲ್ಲಿನಲ್ಲಿ ಕಟ್ಟಿದ್ದಾರೆ. ರೈಲಿನಿಂದ ನೋಡಲು ಬಹಳ ಚೆನ್ನಾಗಿ ಕಾಣುತ್ತೆ. ಸೋನ ಎಂದರೆ ಚಿನ್ನ. ಗ್ವಾಲಿಯರ್ ಕೋಟೆ ನೋಡಲು ಬಹಳ ಚೆನ್ನಾಗಿದೆ. ರೈಲಿನಿಂದಲೇ ಅಷ್ಟು ಚೆನ್ನಾಗಿ ಕಾಣುತ್ತೆ. ಒಳಗೂ ಚೆನ್ನಾಗಿರಬೇಕು. ಒಂದು ಗುಡ್ಡದ ಮೇಲೆ ಕಟ್ಟಿದ್ದಾರೆ. ಝಾನ್ಸಿಯು ಬಹಳ ದೊಡ್ಡ ಸ್ಟೇಶನ್. ಝಾನ್ಸಿ ರಾಣಿ ಲಕ್ಷ್ಮೀಬಾಯಿ ಇದ್ದ ಸ್ಥಳ. ೧೮೫೭ನೆ ಸಿಪಾಯಿ ದಂಗೆಯಲ್ಲಿ ಬ್ರಿಟಿಷರ ಸಂಗಡ ದೇಶದ ಸ್ವಾತಂತ್ರ್ಯಕ್ಕಾಗಿ ವೀರಾವೇಶದಿಂದ ಕಾದಾಡಿದ ವೀರ ರಮಣಿ. ದೆಹಲಿಗೆ ಬಂದಾಗ ೯ ಗಂಟೆ. ಬೊಂಬಾಯಿ ಯಿಂದ ದಾರಿಯುದ್ದಕ್ಕೂ ಮಳೆ ಬರುತ್ತಲೇ ಇದ್ದುದರಿಂದ ಪ್ರಯಾಣ ಸ್ವಲ್ಪವೂ ಆಯಾಸವಾಗಲಿಲ್ಲ.

೧೪ನೆ ರಾತ್ರಿ ೧೧-೩೦ಗೆ ನಮ್ಮ ಅಸೆಂಬ್ಲಿ ಸೇರಿತು. ಸಭಾ ಭವನ ಕಿಕ್ಕಿರಿದು ತುಂಬಿತ್ತು. ಹೊರಗಡೆಯಂತೂ ಸುಮಾರು ಎರಡು ಲಕ್ಷ ಜನ ಸೇರಿದ್ದರು. ಎಲ್ಲಿ ನೋಡಿದರೂ ರಾಷ್ಟ್ರೀಯ ಬಾವುಟಗಳು. ಗಾಡಿಗಳ ಮೇಲೆ, ಮೋಟಾರುಗಳ ಮೇಲೆ ಲಾರಿಗಳ ಮೇಲೆ ಜನರು ಗುಂಪು ಕಟ್ಟಿಕೊಂಡು ಮಹಾತ್ಮಾ ಗಾಂಧೀಕೀ ಜೈ, ಜವಹರಲಾಲ್ ನೆಹ್ರೂಕೀ ಜೈ, ಜೈ ಹಿಂದ್ ಎಂದು ಕೂಗಿದ್ದೇ ಕೂಗಿದ್ದು! ಸಭೆಗೆ ದೇಶ ವಿದೇಶಗಳ ರಾಯಭಾರಿ ಗಳೆಲ್ಲ ಬಂದಿದ್ದರು. ಎಳ್ಳು ಹಾಕೇನೆಂದರೂ ಜಾಗವಿರಲಿಲ್ಲ. ಕಂಬ ಗಳ ಮಧ್ಯೆ, ದಾರಿಯಲ್ಲಿ, ಎಲ್ಲಿ ಒಂದು ಕುರ್ಚಿ ಹಾಕಬಹುದೋ ಅಷ್ಟೂ ಜಾಗ ಬಿಡದೆ ಉಪಯೋಗ ಮಾಡಿಕೊಂಡಿದ್ದರು. ಆಚಾರ್ಯ ಕೃಪಲಾನಿಯವರ ಹೆಂಡತಿ ಸುಚೇತಾ ಕೃಪಲಾನಿಯವರು 'ವಂದೇ ಮಾತರಂ' ಹಾಡಿದರು. ಜವಹರಲಾಲ್ ಮತ್ತು ರಾಧಾಕೃಷ್ಣರವರ

ಭಾಷಣಗಳು ರೋಮಾಂಚಕರವಾಗಿದ್ದವು. ರಾಜೇಂದ್ರ ಪ್ರಸಾದರು ಮಹಾತ್ಮಾ ಗಾಂಧಿಯವರ ಹೆಸರನ್ನು ಹೇಳಿದ ಕೂಡಲೇ ಮೇಜು ಬಡಿದು ಚಪ್ಪಾಳೆ ತಟ್ಟಿದ್ದು ಸಿಲ್ಲುವುದೇ ಕಷ್ಟವಾಯಿತು. ಸ್ವಾತಂತ್ರ್ಯಕ್ಕಾಗಿ ಪ್ರಾಣ ಕೊಟ್ಟ ವೀರರ ಸ್ಮರಣೆಗಾಗಿ ಎರಡು ನಿಮಿಷ ಸಭೆ ಎದ್ದು ನಿಂತು ತನ್ನ ಗೌರವ ಸಲ್ಲಿಸಿತು. ೧೨ ಗಂಟೆ ಹೊಡೆಯುತ್ತಲೆ ಸರಿಯಾಗಿ ನಾವೆಲ್ಲರೂ "ಭಾರತೀಯರು ಆತ್ಮತ್ಯಾಗದಿಂದ, ಬಲಿದಾನದಿಂದ ಸ್ವಾತಂತ್ರ್ಯವನ್ನು ಗಳಿಸಿದ ಈ ಗಂಭೀರ ಸಮಯದಲ್ಲಿ ಭಾರತವಿಧಾನ ಸಭೆಯ ಸದಸ್ಯನಾದ ಎಸ್. ವಿ. ಕೃಷ್ಣಮೂರ್ತಿರಾವ್ ಆದ ನಾನು, ಇಂಡಿಯಾ ಮತ್ತು ಇಂಡಿಯಾ ದೇಶದ ಜನರ ಸೇವೆಗಾಗಿಯೂ ಮತ್ತು ಈ ನಮ್ಮ ಪ್ರಾಚೀನ ದೇಶವು ಪ್ರಪಂಚದಲ್ಲಿ ತನ್ನ ನ್ಯಾಯುವಾದ ಗೌರವಯುತವಾದ ಸ್ಥಾನವನ್ನು ಪಡೆದು, ಪ್ರಪಂಚದ ಶಾಂತಿಗೂ ಮತ್ತು ಮಾನವ ಕುಲದ ಸೌಖ್ಯಕ್ಕೂ ತನ್ನ ಪೂರ್ಣ ಹೃತ್ಪೂರ್ವಕ ಸಹಾಯ ಮಾಡುವಂತೆ ಶಕ್ತಿಯುತವಾಗಿ ಆಗುವದಕ್ಕೂ ನಮ್ರತೆಯಿಂದ ದೀಕ್ಷೆ ಕೊಡುತ್ತೇನೆ" ಎಂದು ಪ್ರಮಾಣವಚನವನ್ನು ತೆಗೆದುಕೊಂಡೆವು. ಆಗ ಮದನಮೋಹನ ಮಾಳವೀಯರ ಮಗ ಶ್ರೀ ಗೋವಿಂದ ಮಾಲವೀಯ (ಅವರೂ ಸದಸ್ಯರು) ಶಂಖದಿಂದ ಶಂಖನಾದ ಮಾಡಿದರು. ಹರ್ಷಧ್ವನಿಗಳ ಮಧ್ಯೆ ಸಭೆಯು ಸ್ವಾತಂತ್ರ್ಯವನ್ನು ಸಾರಿ ದೇಶದ ಆಡಳಿತ ವಹಿಸಿಕೊಂಡಿದ್ದೇನೆ ಎಂದು ಘೋಷಿಸಿತು. ಜವಹರಲಾಲರೂ, ಅಧ್ಯಕ್ಷ ರಾಜೇಂದ್ರ ಪ್ರಸಾದರೂ, ಲಾರ್ಡ್ ಮೌಂಟ್ ಬ್ಯಾಟನ್ನರಿಗೆ ಗೌವರ್ನರ್ ಜನರಲ್ ಆಗಲು ಸಭೆ ಒಪ್ಪಿದೆ ಎಂದು ತಿಳಿಸಲು ಅಧಿಕಾರ ಕೊಟ್ಟಿತು. ಸುಚೇತಾ ಕೃಪಲಾನಿಯವರು "ಜನಗಣ ಮನ" ಮತ್ತು ಕವಿ ಇಕ್ಬಲ್‌ರ "ಸಾರೇಜಹಾನೆ ಅಚ್ಛಾ ಹಿಂದೂಸ್ಥಾನ್ ಹಮಾರಾ" ಗೀತೆಗಳನ್ನು ಹಾಡಿದರು. ಹೊರಗಡೆ ಬರಲು ೧ ಗಂಟೆ ಹಿಡಿಯಿತು. ಜವಹರಲಾಲ್‌ರನ್ನು ನೋಡುವವರೆಗೂ ಜನರು ದಾರಿಯನ್ನೇ ಬಿಡಲಿಲ್ಲ. ಗಾಡಿ, ಮೋಟಾರು ಯಾವುದೂ ಸಿಗದೆ ನಡೆದು ಬಂದಾಗ ರಾತ್ರಿ ಒಂದು ಗಂಟೆ !

ಪುನಃ ಬೆಳಿಗ್ಗೆ ಸಭೆ. ಲಾರ್ಡ್ ಮೌಂಟ್ ಬ್ಯಾಟನ್ ಜನರಿಗೆ ಷೇಕ್ ಹ್ಯಾಂಡ್ ಕೊಟ್ಟು ಹೋಗುವವರೆಗೆ ಜನ ದಾರಿಯನ್ನೇ ಬಿಡಲಿಲ್ಲ. ಒಳಗೆ ಬರಲು ೧೦ ನಿಮಿಷ ತಡವಾಯಿತು. ಅಮೇರಿಕಾ, ಇಂಗ್ಲೆಂಡ್, ಆಸ್ಟ್ರೇಲಿಯಾ, ಕೆನಡ, ಚೀನಾ, ಫ್ರಾನ್ಸ್, ಜಪಾನ್, ದಕ್ಷಿಣ ಆಫ್ರಿಕಾ ಮುಂತಾದ ಪ್ರಪಂಚದ ನಾನಾದೇಶಗಳಿಂದ ಸಂದೇಶಗಳು ಬಂದಿದ್ದವು. ಗೌವರ್ನರ್ ಜನರಲ್ ಮತ್ತು ರಾಜೇಂದ್ರ ಪ್ರಸಾದರು ಇಬ್ಬರೂ "ಮಹಾತ್ಮಾಜಿಯವರು ಸ್ವತಂತ್ರ ಭಾರತದ ನಿರ್ಮಾಪಕರು" ಎಂದು ಹೇಳಿದಾಗಲೂ, "ಇನ್ನುಮೇಲೆ ನಾನು ನಿಮ್ಮ ಸೇವಕ, ನಿಮ್ಮವನು, ವೈಸರಾಯ್ ಅಲ್ಲ" ಎಂದು ಹೇಳಿದಾಗಲೂ ಕಿವಿ ಕಿವುಡಾಗುವಂತೆ ಮೇಜನ್ನು ತಟ್ಟಿದರು. ರಾತ್ರಿ ಸಭೆಯಲ್ಲಿ—ಈ ಸಭೆಯೂ ಬಹಳ ಗಂಭೀರವಾಗಿತ್ತು. ಸಭೆ ಮುಗಿಯುತ್ತಲೆ ನಮ್ಮ ವಿಧಾನ ಸಭೆಯ ಗೋಪುರದ ಮೇಲೆ ಎಲ್ಲರೂ ಎದ್ದುನಿಂತ ಮೇಲೆ ಮೌಂಟ್ ಬ್ಯಾಟನ್ ರಾಷ್ಟ್ರಧ್ವಜವನ್ನು ಹಾರಿಸಿದರು. ಹೊರಗೆ ಸುಮಾರು ೩-೪ ಲಕ್ಷ ಜನ ಇರಬಹುದು.

ಸಂಜೆ ೬ಕ್ಕೆ "ಪ್ರಿನ್ಸಸ್ ಪಾರ್ಕ್" ವೈಸರಾಯರಿಂದ ಮಿಲಿಟರಿ ಪರೇಡ್ ಮತ್ತು ಧ್ವಜವಂದನೆ ಇತ್ತು. ಎರಡು ಗಂಟೆಯಿಂದಲೇ ಜನ ಉರಿಯುವ ಬಿಸಲಿನಲ್ಲೇ ಸೇರಲು ಆರಂಭಿಸಿದರು. ೫-೩೦ರ ಹೊತ್ತಿಗೆ ೫-೬ ಲಕ್ಷ ಜನ ನೆರೆದಿದ್ದರು. ಹಾಕಿದ್ದ ಕುರ್ಚಿಗಳೆಲ್ಲ ಮುರಿದವು. ಪರೇಡ್ ಜಾಗವೆಲ್ಲ ಜನರಿಂದ ತುಂಬಿಹೋಗಿ ಪರೇಡ್ ನಡೆಯುವುದೇ ಕಷ್ಟವಾಯಿತು. ರಾಜೇಂದ್ರ ಪ್ರಸಾದರಿಗೆ ದಾರಿಯೇ ದೊರೆಯದೆ ಹಿಂದಕ್ಕೆ ಹೋಗಬೇಕಾಯಿತು. ನೆಹರೂ ಬಹು ಪ್ರಯಾಸದಿಂದ ದಾರಿ ಮಾಡಿ ವೈಸರಾಯರನ್ನು ಕರೆದುಕೊಂಡು ಬಂದರು. 'ಪಂಡಿತ ಮೌಂಟ್ ಬ್ಯಾಟನ್‌ಕಿ ಜೈ' ಎಂಬ ಕೂಗು ಬೇರೆ ಜನರ ನೂಕು ನುಗ್ಗಲಿನಲ್ಲಿ ಹಿಂದಕ್ಕೆ ಬರುತ್ತೇವೆಯೊ ಇಲ್ಲವೊ ಎನ್ನುವಂತಾಯಿತು. ಹೆಂಗಸರು, ಮಕ್ಕಳು, ಗಂಡಸರು ಎಲ್ಲಿ ನೋಡಿದರೂ ಜನರ ತಲೆಗಳೇ ಕಾಣುತ್ತಿದ್ದವು. 'ಇಂಡಿಯಾ ಗೇಟ್' ಎನ್ನುವ ಮಹಾದ್ವಾರ

ಸುಮಾರು ೩೦೦ ಅಡಿ ಎತ್ತರವಿದೆ. ಅದರ ಮೇಲೆ ಸಹ ಜನ ಹತ್ತಿ ಕೂತಿದ್ದರು. ವೈಸರಾಯರು ಧ್ವಜ ಹಾರಿಸಿದಾಗ ಹ್ಯಾಟ್‌ಗಳು, ಛತ್ರಿಗಳು, ದುಡ್ಡು, ಹಣ್ಣು—ಏನು ಸಿಕ್ಕರೆ ಅದನ್ನು ಜನರು ಸಂತೋಷ ಭರದಲ್ಲಿ ಎಸೆದರು. ಅನೇಕರಿಗೆ ಗಾಯಗಳಾದವು. ಮೈಸೂರಿನಿಂದ ಬಂದ ಮಳವಳ್ಳಿ ವೀರಪ್ಪ ಕೆಳಗೆ ಬಿದ್ದು ಕನ್ನಡಕ ಕಳೆದುಕೊಂಡು, ಬೆರಳು ಗಾಯ ಮಾಡಿಕೊಂಡು, ಜೀವಸಹಿತ ಬಂದದ್ದು ಕಷ್ಟವಾಯಿತು. ಅವನ ಮೇಲೆ ಹತ್ತಿ, ಜನರು ನೂಕುನುಗ್ಗಲಿನಲ್ಲಿ ತುಳಿದರು. ಕೊನೆಗೆ ಕೆಲವರು ಸಿಕ್ಕರು ಬಂದು ಎಬ್ಬಿಸಿ ಕಳಿಸಿದರು. ಏನಿಲ್ಲೆಂದರೂ ೫೦೦-೬೦೦ ಕುರ್ಚಿ ಮುರಿದಿರಬೇಕು.

ರಾತ್ರಿ ಎಲ್ಲಿ ನೋಡಿದರೂ ದೀಪೋತ್ಸವ! ೧೦-೧೫ ಗಂಟೆಗೆ ನಮಗೆಲ್ಲ ವೈಸರಾಯರ ಸ್ವಾಗತ. ಚಪ್ಪಲಿ ಹಾಕಿಕೊಂಡ ಗಾಂಧಿ ಟೋಪಿಯವರಿಗೆ ವೈಸರಾಯರ ಭವನಕ್ಕೂ ಪ್ರವೇಶವಾಯಿತು. ಸುಮಾರು ೬೦೦-೭೦೦ ಜನ ಬಂದಿರಬೇಕು. ಕೆಲವರು ಯೂರೋಪಿಯನ್ ಉಡುಪು, ಇನ್ನು ಕೆಲವರು ಉತ್ತರ ಹಿಂದೂಸ್ಥಾನದ ಷೇರ್ವಾನಿ, ಮತ್ತು ಸುರ್ವಾಲ್. ನಮ್ಮವರೆಲ್ಲ ಚಪ್ಪಲಿ ಪಂಚೆ, ಜುಬ್ಬ, ಟೋಪಿ. ಹೆಂಗಸರಂತೂ ಬಣ್ಣ ಬಣ್ಣದ ಬಟ್ಟೆಗಳನ್ನು ಧರಿಸಿ, ಉತ್ಸವಕ್ಕೊಂದು ಕಳೆಕೊಟ್ಟರು.

ನಿಂಬೆಹಣ್ಣಿನ ಪಾನಕ, ಪರಬತ್ತು, ಸೋಡಾ, ಕುಡಿಯುವವರಿಗೆ ವ್ಹಿಸ್ಕಿ, ಬ್ರಾಂದಿ. ಇದೇ ಸಮಯ ಎಂದು ಕುಡಿಯುವ ಪುಣ್ಯಾತ್ಮರೂ ಕುಡಿದರು. ವೈಸರಾಯ್ ಭವನ ಬಹಳ ದೊಡ್ಡದು. ಬರೀ ಕೆಂಪು ಕಲ್ಲಿನಲ್ಲಿ ಕಟ್ಟಿದ್ದಾರೆ. ನೆಲಕ್ಕೆ ರತ್ನಗಂಬಳಿ, ಮೇಲೆ ಒಳ್ಳೆ ಚಿತ್ರಗಳನ್ನು ಬರೆಸಿದ್ದಾರೆ. ಎಲ್ಲರೂ ಸ್ವಾಗತ ಭವನದಲ್ಲಿ ಗುಂಪುಗುಂಪಾಗಿ ಮಾತಾಡುತ್ತ, ಕುಡಿಯುತ್ತ ನಿಂತಿರಬೇಕು. ನಮಗೇನೋ ಬಹಳ ಕೃತಕವಾಗಿ ಕಂಡಿತು. ಸ್ವಾತಂತ್ರ್ಯದಿನದ ಉತ್ಸವದಲ್ಲಿ ಇದೇಕೆ ಎಂದು. ಅದೇ ದಿನ 'ಗಾಂಧೀಜಿ' ಕಲ್ಕತ್ತದಲ್ಲಿ ಜನರಿಗೆ "ಪ್ರಾರ್ಥನೆ ಮಾಡಿ, ಉಪವಾಸಮಾಡಿ, ನೂಲು ತೆಗೆಯಿರಿ" ಎಂದು ಉಪದೇಶ

ಮಾಡಿದರು. ಲಾಹೋರಿನಲ್ಲಿ ಹಿಂದೂ ಮುಸಲ್ಮಾನರ ಜಗಳದಲ್ಲಿ ನೂರಾರು ಜನ ಕೊಲೆಯಾದರು. ಈಗ ಬಂದಿರುವ ವರ್ತಮಾನದಂತೆ ಇಡೀ ಲಾಹೋರ್ ನಗರವೇ ಸುಟ್ಟು ಹೋಗಿದೆಯಂತೆ! ಇದೇನು ಹುಚ್ಚುತನ! ಕೊನೆಗೆ ವೈಸರಾಯ್ ದಂಪತಿಗಳು ಬಂದು ಕೆಲವರ ಕೈ ಕುಲುಕಿದರು. ಕೆಳಗಡೆ ತೋಟದಲ್ಲಿ ಗಿಡಗಳಿಗೆಲ್ಲ ಬಣ್ಣದ ಬಲ್ಬ್‌ಗಳನ್ನು ಹಾಕಿ ದೀಪೋತ್ಸವ ಏರ್ಪಡಿಸಿದ್ದರು. ಬ್ಯಾಂಡ್ ಸಂಗೀತ. ಹಾಗೇ ಸ್ವಲ್ಪ ತಿರುಗಾಡಿ ಹರಟೆ ಹೊಡೆದು ಮನೆಗೆ ಬಂದಾಗ ಒಂದು ಗಂಟೆ.

ಬೆಳಿಗ್ಗೆ (೧೬-೮-೪೭) ೮-೩೦ಗೆ ಲಾಲ್‌ಕಿಲ್ಲಾ(ಕೆಂಪು ಕೋಟೆ, ರೆಡ್ ಫೋರ್ಟ್)ದಲ್ಲಿ ಧ್ವಜವಂದನೆ. ಇದು ಮೊಗಲ್ ಚಕ್ರವರ್ತಿಗಳ ಕೋಟೆಯಾಗಿತ್ತು. ಇದನ್ನು ಕೆಂಪುಕಲ್ಲಿನಿಂದ ಕಟ್ಟಿರುವದರಿಂದ 'ಲಾಲ್ ಕಿಲ್ಲಾ' ಎಂದು ಕರೆಯುತ್ತಾರೆ. ಇಲ್ಲಿನ ಏರ್ಪಾಡು ಬಹು ಸಮರ್ಪಕವಾಗಿತ್ತು. ಜನಸಂದಣಿ ಎಲ್ಲವೂ ಕೋಟೆಯ ಕಂದಕದ ಮುಂದೆ ಇತ್ತು. ನಮ್ಮನ್ನು ಕೋಟೆ ಒಳಗೆ ಬಿಟ್ಟರು. ಕೋಟೆ ಗೋಡೆಯ ಬುರ್ಜಿನ ಮೇಲೆ ಕುಳಿತುಕೊಳ್ಳಲು ಜಾಗ ಮಾಡಿದ್ದರು. ಹಿಂದಿನ ಸಾಯಂಕಾಲ ಜನರು ಅಷ್ಟು ತೊಂದರೆ ಪಟ್ಟಿದ್ದರೂ ಅವರ ಉತ್ಸಾಹಕ್ಕೆ ಮಿತಿಯೇ ಇರಲಿಲ್ಲ. ಸುಮಾರು ೪-೫ ಲಕ್ಷ ಜನರು ಇಲ್ಲಿಯೂ ಸೇರಿರಬೇಕು. ಎದುರುಗಡೆ ಐ.ಎನ್.ಎ. ಸೈನಿಕರು, ದೇಶ ಸೇವಿಕೆಯರು ಸಾಲುಗಟ್ಟಿ ನಿಂತಿದ್ದರು. 'ಜನಗಳ ಅಲೆ' ಎಂದು ನಾನು ಪುಸ್ತಕದಲ್ಲಿ ಓದಿದ್ದೆ. ಅದು ಏನು ಎನ್ನುವುದನ್ನು ಕಣ್ಣಾರೆ ಕಂಡೆ. ಒಂದು ಸಲ ಒಂದು ನೂಕು ನೂಕಿದರು ಎಂದರೆ ಸಾವಿರಾರು ಜನ ನದಿಯಲ್ಲಿ ಸುಳಿ ಬಂದಂತೆ ಸುಳಿದು ಹಾಗೇ ಆ ಅಲೆಯು ಮಾಯವಾಗುತ್ತಿತ್ತು. ಜವಹರರು ೮-೩೦ ಗಂಟೆಗೆ ಸರಿಯಾಗಿ ಧ್ವಜಾರೋಹಣ ಮಾಡಿ ಭಾಷಣ ಮಾಡಿದರು. ಆ ಭಾಷಣ ಚರಿತ್ರಾರ್ಹವಾದದ್ದು. ಒಳಗಡೆ ಕೋಟೆಯ ಶಿಖರದ ಮೇಲೆ ಧ್ವಜಾರೋಹಣ ಮಾಡಿದರು. ಕೆಳಗಡೆ ಗೂಡುಗಳಲ್ಲಿ ಮಿಲಿಟರಿ ಅಧಿಕಾರಿಗಳು ಏಳು ಜನ ನಿಂತಿದ್ದರು.

ಜನರ ಆ ಉತ್ಸಾಹ ಮತ್ತು ಆನಂದವನ್ನು ನೋಡುವದೇ ಒಂದು ದೃಶ್ಯವಾಗಿತ್ತು. ಅಂತೂ ಈ ಆಗಸ್ಟ್ ೧೫-೧೬ನೆ ದಿನಗಳು ಚರಿತ್ರಾರ್ಹವಾದ ದಿನಗಳು.

ರಾತ್ರಿ ಇಂಡಿಯಾ ಗೇಟ್ ಬಳಿ, ಚಾಂದ್ನಿಚೌಕ, ಕೊನಾಲ್ ಸರ್ಕಲ್—ಎಲ್ಲಿ ಎಲ್ಲಿ ನೋಡಿದರೂ ದೀಪೋತ್ಸವ. ಗಂಡಸರು, ಹೆಂಗಸರು, ಹುಡುಗರು, ಮಕ್ಕಳು ಹಬ್ಬದ ಉಡುಗೆ ಉಟ್ಟು—ತಿರುಗಿದ್ದೆ ತಿರುಗಿದ್ದು. ಯಾವ ವಾಹನವನ್ನೂ ಬಿಡಲಿಲ್ಲ. ಇದು ಒಂದು ಅಪೂರ್ವ ದೃಶ್ಯ. ಈ ಎರಡು ದಿನಗಳು ಪಾರ್ಟಿಗಳು, ಸಭೆಗಳು, ಔತಣಗಳಿಗೆ ಲೆಕ್ಕವಿಲ್ಲ. ತಿರುಗಿ ತಿರುಗಿ ಸಾಕಾಯಿತು.

ಇವತ್ತು ನಮ್ಮ ಪಾರ್ಟಿ ಮೀಟಿಂಗ್. ನಾಡಿದ್ದಿನಿಂದ ಪುನಃ ಸಭೆ. ನಾಳೆ ಚಂಗಲರಾಯ ರೆಡ್ಡಿಯವರು ವಿಮಾನ ಮೂಲಕ ಮೈಸೂರಲ್ಲಿ ಸತ್ಯಾಗ್ರಹ ಹೂಡಲು ಬೆಂಗಳೂರಿಗೆ ಹೊರಡುತ್ತಾರೆ. ನಾನು ಈ ಸಭೆ ಈ ಸಲ ಮುಗಿಯುವವರೆಗೆ ಇಲ್ಲಿಯೇ ಇರಬೇಕೆಂದು ಹೇಳಿದ್ದಾರೆ. ಬಂದ ಮೇಲೆ ನಾನೂ ಪ್ರಾಯಶಃ ಸರ್ಕಾರದ ಆತಿಥ್ಯ ಪಡೆಯಲು ಹೋಗಬೇಕಾದೀತು. ಅಂತೂ ನೋಡಬೇಕು. ದಿವಾನರು ಇನ್ನೂ ಬಂದಿಲ್ಲ. ಇಲ್ಲಿ ಜನರು ಸ್ವಾತಂತ್ರ್ಯವನ್ನು ಪಡೆದು ಆನಂದಿಸುವಾಗ ನಾವು ಅಲ್ಲಿ ನಮ್ಮ ಸ್ವಾತಂತ್ರ್ಯಕ್ಕೂ ಸರ್ಕಾರದೊಡನೆ ಹೋರಾಡಬೇಕು. ತಪಸ್ಸಿಲ್ಲದೆ ಯಾವುದೂ ಸಿದ್ಧಿಸುವುದಿಲ್ಲ. ನಮ್ಮ ತಪಸ್ಸು ಇನ್ನೂ ಸಾಲದು.

ನೀವೆಲ್ಲ ಸ್ವಾತಂತ್ರ್ಯ ದಿನಾಚರಣೆ ಹೇಗೆ ಮಾಡಿದಿರಿ ಬರೆ. ಇಲ್ಲಿ ಎಸ್. ಆರ್. ಎಸ್. ರಾಘವ್ವ ಎಂತ ಇದ್ದಾರೆ. ಕರ್ನಾಟಕ ಸಂಘದಿಂದ ೧೩ನೇ ತಾರೀಖು ಮೂರು ಗಂಟೆಗೆ ಧ್ವಜವಂದನೆ ಇಟ್ಟಿದ್ದರು. ದಿವಾಕರ್, ನಿಜಲಿಂಗಪ್ಪ, ರೆಡ್ಡಿ, ನಾನು ಎಲ್ಲರೂ ಮಾತನಾಡಿದೆವು. ವಿ. ಕೆ. ಆರ್. ವಿ. ರಾವ್ ಎಂತ ಒಬ್ಬ ಪ್ರೊಫೆಸರ್ ಇದ್ದಾರೆ. ಕನ್ನಡದವರು—ಕರ್ನಾಟಕ ಏಕೀಕರಣದ ವಿಷಯದಲ್ಲಿ ತುಂಬ ಆಸಕ್ತರು. ಈಗ ೩-೩೦ ಗಂಟೆ—ಅವರನ್ನು ನೋಡುವುದಕ್ಕೆ ಹೋಗಬೇಕು.

೨೨-೮-೪೭

ನಿನ್ನ ಮತ್ತು ಚಂದ್ರುನ ಕಾಗದಗಳು ಈ ದಿನ ತಲ್ಪಿದವು. ನಾನು ೧೪-೮-೪೭ನೆ ದಿನವೇ ಒಂದು ಕಾರ್ಡು, ಪುನಃ ೧೮-೮-೪೭ ದಿನ ಒಂದು ಕವರು ಬರೆದಿದ್ದೆ. ಪ್ರಾಯಶಃ ಎರಡು ಕಾಗದಗಳೂ ಇಷ್ಟರಲ್ಲಿ ಸೇರಿರಬಹುದು. ೧೮-೮-೪೭ರಲ್ಲಿ ಬರೆದ ಕಾಗದದ ಮೊದಲನೆ ಪುಟ ಮರೆತುಬಿಟ್ಟೆ. ಇದರೊಂದಿಗೆ ಅದನ್ನೂ ಕಳುಹಿಸಿದ್ದೇನೆ. ಚಂದ್ರುಗೆ ಕೊಡು. ೧೫-೮-೪೭ನೆ ದಿವಸ ಸ್ವಾತಂತ್ರ್ಯ ದಿನೋತ್ಸವದಲ್ಲಿ ನೀನೂ ಪಾಯಸ ತಿಂದು ಭಾರಿ ಮೆರವಣಿಗೆ ಹೊರಟಿದ್ದೇ ಸಂತೋಷ. ನಮ್ಮ ದೇಶ ನಮ್ಮ ಜನ್ಮಕಾಲದಲ್ಲಿ ಸ್ವಾತಂತ್ರ್ಯವನ್ನು ಪಡೆಯುತ್ತೋ ಇಲ್ಲವೊ ಎಂಬ ಅನುಮಾನ ಬಹಳ ಇತ್ತು. ನೀವೆಲ್ಲ ಹುಡುಗರು ಪುಣ್ಯವಂತರು. ಇನ್ನು ಮೇಲೆ ಸ್ವತಂತ್ರ ಭಾರತದ ಪ್ರಜೆಗಳು. ಇಲ್ಲಿ ಡೆಲ್ಲಿಯಲ್ಲಿ ಬಹಳ ದೊಡ್ಡ ಉತ್ಸವ. ೫-೬ ಲಕ್ಷ ಜನ ಸೇರಿದ್ದರು. ಬಾವುಟ, ದೀಪೋತ್ಸವ—ಹೆಂಗಸರು, ಮಕ್ಕಳು ಹೊಸ ಬಟ್ಟೆ ಹಾಕಿಕೊಂಡು ಗಾಂಧೀಕೀ ಜೈ, ಜವಹರ್‌ಲಾಲ್ ನೆಹ್ರೂಕಿ ಜೈ ಎಂದು ಕೂಗಿದ್ದೂ ಕೂಗಿದ್ದೆ. ಆ ದಿನ ದೆಹಲಿಯಲ್ಲಿ ಇಂಡಿಯಾ ಗೇಟ್ ಬಳಿ ಬಾವುಟ ಹಾರಿಸಿದಾಗ ನಿನ್ನಷ್ಟೆ ಒಬ್ಬ ಹುಡುಗನಿಗೆ ಮಿಲಿಟರಿ ಉಡುಪು ಹಾಕಿ ಮೋಟಾರ್ ಮೇಲೆ ನಿಲ್ಲಿಸಿದ್ದರು. ಬಂದ ಬಂದವರಿಗೆಲ್ಲ 'ಜೈ ಹಿಂದ್' ಎಂದು ನಮಸ್ಕಾರ ಮಾಡುತ್ತಿದ್ದ. ಅವನನ್ನು ನೋಡಿದಾಗ ನಿನ್ನ ಜ್ಞಾಪಕ ಬಂದಿತು. ನೀನೂ ದೊಡ್ಡವನಾಗಿ, ಬುದ್ಧಿವಂತನಾಗಿ ದೇಶಕ್ಕೆ ಹೆಸರು ತರಬೇಕು. ಭಾರತ ಸ್ವತಂತ್ರವಾದರೂ ನಾವು ಮೈಸೂರಿನಲ್ಲಿ ಸ್ವತಂತ್ರವಾಗಿಲ್ಲ, ನಮ್ಮ ಸರಕಾರ ತೊಂದರೆ ಕೊಡುತ್ತಿದೆ. ನಾವೂ ನಮ್ಮ ದೇಶದಲ್ಲಿ ಸ್ವತಂತ್ರವಾಗಬೇಕಲ್ಲ. ಅದಕ್ಕೆ ನಮ್ಮ ಕಾಂಗ್ರೆಸ್ ಪುನಃ ಸತ್ಯಾಗ್ರಹ ಹೂಡುತ್ತದೆ. ಆಗ ಪುನಃ ನಾನೂ ಎಲ್ಲರ ಜತೆಗೆ ಜೈಲಿಗೆ ಹೋಗಬೇಕಾಗುತ್ತೋ ಏನೋ? ನಾವು ಗುಲಾಮರಾದರೂ ಮಕ್ಕಳಾದ ನೀವಾದರೂ ಸ್ವತಂತ್ರರಾಗಬೇಕು. ಡೆಲ್ಲಿ ಪಾರ್ಲಿಮೆಂಟಿನಿಂದ ಮೈಸೂರಿನ ಜೈಲಿಗೆ ಹೋದರೆ ನೀವು ಯಾರೂ ಯೋಚನೆ

ಮಾಡಬಾರದು. ಈ ಸಲ ಬಹಳ ದಿನ ನಡೆಯುವುದಿಲ್ಲ. ೧-೨ ತಿಂಗಳಲ್ಲೇ ಇತ್ಯರ್ಥವಾಗುತ್ತೆ.

ಇಲ್ಲಿ ಜವಹರಲಾಲರನ್ನು ನೋಡಲು ಅವರ ಮನೆಗೆ ಹೋಗಿದ್ದೆವು. ಪಟೇಲರನ್ನು ನೋಡುವುದಕ್ಕೂ ಹೋಗಿದ್ದೆವು. ಎಲ್ಲರೂ ಆಶೀರ್ವಾದ ಮಾಡಿದ್ದಾರೆ. ನಮ್ಮ ಸಭೆಯು ಈಗ ಇರುವ ಕಾರ್ಯಕ್ರಮದಂತೆ ಈ ತಿಂಗಳ ಕೊನೆಯವರೆಗೆ ಆಗಬಹುದು. ಆದರೆ ಕೆಲಸ ಬಹಳ ನಿಧಾನವಾಗಿ ನಡೆಯುತ್ತಿದೆ. ಪ್ರಾಯಶಃ ಸೆಪ್ಟೆಂಬರ್ ಮೊದಲನೆ ವಾರವೂ ನಡೆಯಬಹುದು—ಗೊತ್ತಿಲ್ಲ. ತಿಳಿಸುತ್ತೇನೆ.

೨೨-೮-೪೭

ನಿನ್ನ ಕಾಗದ ಈ ದಿನ ತಲ್ಪಿತು. ನಮ್ಮ ಸಭೆ ೩೧-೮-೪೭ರ ವರೆಗೆ ನಡೆಯುತ್ತೆ. ಅದಕ್ಕೆ ಮುಂಚೆ ಹೊರಡುವಂತೆ ಇಲ್ಲ. ನಾಳೆಯಿಂದ ೧೦ ರಿಂದ ೧, ಪುನಃ ೩ರಿಂದ ೬ರವರೆಗೆ ನಡೆಯುತ್ತೆ. ೮ರಿಂದ ೧೧ರವರೆಗೆ ರಾತ್ರಿ ಪಾರ್ಟಿ ಮೀಟಿಂಗ್ ನಡೆಯುತ್ತೆ. ಕಾರಣ, ಕೆಲಸ ಬಹಳ ಇರುವದರಿಂದ ಸೆಪ್ಟೆಂಬರ್ ೧೦ರಿಂದ ಪ್ರಾಂತ್ಯ ಶಾಸನ ಸಭೆಗಳು ಸೇರುತ್ತವೆ. ಪ್ರಾಂತ್ಯಗಳ ಮಂತ್ರಿಗಳೆಲ್ಲ ಈ ವಿಧಾನ ಸಭೆಗಾಗಿ ಇಲ್ಲಿ ಬಂದಿದ್ದಾರೆ. ಅವರೆಲ್ಲ ತಮ್ಮ ಪ್ರಾಂತ್ಯಗಳಿಗೆ ಹೋಗಿ ಪ್ರಾಂತ್ಯಶಾಸನ ಸಭೆಗಳ ಕಾರ್ಯ ನೋಡಿಕೊಳ್ಳಬೇಕು. ಆದ್ದರಿಂದ ೩೧ಕ್ಕೇನೆ ಮುಗಿಯಬೇಕು. ಈ ಮೀಟಿಂಗ್‌ಗಳ ಗೊಂದಲದಲ್ಲಿ ಯಾವುದಕ್ಕೂ ಬಿಡುವೇ ಇಲ್ಲ. ಈ ಕಾಗದ ಸಹ ಇಂದು ರಾತ್ರಿ ೧೧ ಗಂಟೆ(೨೬-೮-೪೭)ಯಲ್ಲಿ ಬರೆಯುತ್ತಿದ್ದೇನೆ.

ಕರ್ನಾಟಕ ಪ್ರಾಂತ್ಯ ನಿರ್ಮಾಣಕ್ಕಾಗಿ ನಿನ್ನೆಯ ದಿನ ನಾವೆಲ್ಲ ಕನ್ನಡದ ಕಾಂಗ್ರೆಸ್ ಸದಸ್ಯರು ಸರ್ದಾರ್ ಪಟೇಲರನ್ನು ಕಂಡಿದ್ದೆವು. ಅವರೂ ಬೆಂಬಲ ಕೊಟ್ಟಿದ್ದಾರೆ. ದಿವಾ‌ನ್ ಮೊದಲಿಯಾರರು, ಪಟೇಲ್ ಮತ್ತು ಪಟ್ಟಾಭಿಯವರ ಸಂಗಡ ಬಹಳ ಹೊತ್ತು ಏನೇನೋ ಮಾತನಾಡುತ್ತಿದ್ದರು. ಏನು ಎಂಬುದು ಗೊತ್ತಿಲ್ಲ. ಪ್ರಾಯಶಃ ನಮ್ಮ ಸತ್ಯಾಗ್ರಹದ ವಿಷಯ ಇದ್ದರೂ ಇರಬಹುದು. ಆದರೆ ಪಟೇಲರಿಗೂ,

ಪಟ್ಟಾಭಿಯವರಿಗೂ ಎಲ್ಲ ಗೊತ್ತಿದೆ. ಮೊದಲಿಯಾರರಿಗೆ ಸ್ವಲ್ಪ ಫಜೀತಿಗೆ ಇಟ್ಟುಕೊಂಡಿರುವಂತೆ ಕಾಣುತ್ತದೆ. ಏನಾಗುತ್ತೊ ನೋಡ ಬೇಕು.

ನಿನ್ನೆ ಬೆಳಿಗ್ಗೆ ಇಲ್ಲಿಗೆ ಒಂದು ಮೈಲಿ ದೂರದಲ್ಲಿರುವ ಪುರಾಣ ಕಿಲ್ಲೆ (ಹಳೆ ಕೋಟೆ) ನೋಡಲು ಹೋಗಿದ್ದೆ. ಅದು ಮೊದಲು ಪಾಂಡವರ ರಾಜಧಾನಿಯಾಗಿದ್ದ ಇಂದ್ರಪ್ರಸ್ಥವಾಗಿತ್ತಂತೆ. ಒಳಗಡೆ ಷೇರ್‌ಷಹ ಕಟ್ಟಿದ ಮಸೀದಿ ಮತ್ತು ಹವಾಖಾನಾ ಎಂಬ ಗಾಳಿಗೋಪುರಗಳಿವೆ. ಗೋಪುರದ ಮೇಲೆ ನಿಂತರೆ ಕೋಟೆಗೆ ಒಂದು ಮೈಲಿಯಲ್ಲಿ ಹರಿಯುವ ಯಮುನಾ ನದಿ ಕಾಣುತ್ತೆ. ಈಚೆ ಮೂರು ದಿಕ್ಕುಗಳಲ್ಲು ದೆಹಲಿ ಪಟ್ಟಣ ಹಬ್ಬಿರುವುದನ್ನು ಕಾಣಬಹುದು. ಕೋಟೆಯ ಒಳಗೆ ನೋಡಬೇಕಾದ್ದೇನೂ ಇಲ್ಲ. ಒಳ್ಳೆಯ ಹುಲ್ಲು ಗಾವಲು ಮತ್ತು ಗಿಡಗಳನ್ನು ಬೆಳೆಸಿದ್ದಾರೆ. ಕೋಟೆಯ ಹೊರಗೆ ರಹಮುದ್ದೀನ್ ಖಲಿಫ್ ಎಂಬ ಮುಸಲ್ಮಾನನ ಗೋರಿ ಇದೆ. ನೋಡೋಣ ಎಂತ ಹೋಗಿದ್ದೆವು. ಒಂದು ಸಣ್ಣ ದಿಣ್ಣೆಯ ಮೇಲೆ ಇದೆ. ದಾರಿಯುದ್ದಕ್ಕೂ ಒಣಗಿದ ಜಾಲಿ ಮರದ ತುಂಡುಗಳನ್ನು ಎರಡು ಪಕ್ಕದಲ್ಲಿ ನಿಲ್ಲಿಸಿದ್ದಾರೆ. ಮೇಲೆ ಗೋರಿ ಹತ್ತಿರ ಹೋಗುವವರೆಗೂ ಈ ಮರಗಳ ಮೇಲೆ, ದಿಣ್ಣೆಯ ಮೇಲೆ ಎಲ್ಲ ಮರಗಳು. ಕೊಂಬೆಗಳಿಗೆ ಕೆಂಪು ಮಣ್ಣಿನ ನೀರಿನ ಗಡಿಗೆಗಳನ್ನು ಜೋರಲು ಹಾಕಿದ್ದಾರೆ. ಅವುಗಳ ಮಧ್ಯೆ ಹೋದರೆ ಎಲ್ಲೋ ಸ್ಮಶಾನದಲ್ಲಿ ರುಂಡಗಳ ಮಧ್ಯೆ ಹೋದಂತೆ ಭಯಂಕರವಾಗಿತ್ತು—ಮೇಲೆ ಗೋರಿ. ೫-೬ ಆಡುಗಳನ್ನು ಆಡಿಸುತ್ತ ಒಬ್ಬ ಸಾಬಿ ಇದ್ದ.

ಮೊನ್ನೆ ದೆಹಲಿಯಲ್ಲಿ ಚಾಂದ್ನಿ ಚೌಕದ ಬಳಿ ಯಾರೋ ಒಬ್ಬ ಇನ್ನೊಬ್ಬನಿಗೆ ಚೂರಿಯಿಂದ ಇರಿದ. ಅಂಗಡಿಗೆ ಬೆಂಕಿ ಇಟ್ಟು, ಲೂಟಿ ಮಾಡಲು ನೋಡಿದರು. ಮೂರು ಜನರ ವಸ್ತಗಿರಿಯಾಗಿದೆ. ಹಳೆ ದೆಹಲಿಯಲ್ಲಿ ಕರ್ಫ್ಯೂ ಹಾಕಿದ್ದಾರೆ. ನಾವು ಇರುವ ಹೊಸ ದೆಹಲಿ ಯಲ್ಲಿ ಏನೂ ಗಲಭೆ ಇಲ್ಲ. ಈಗ ಅಲ್ಲಿಯೂ ಏನೂ ಇಲ್ಲ. ಇದಕ್ಕೆ

ಕಾರಣ ಪಶ್ಚಿಮ ಪಂಜಾಬಿನಿಂದ ಮನೆ ಮಠ, ಆಸ್ತಿಪಾಸ್ತಿ ಎಲ್ಲ ಬಿಟ್ಟು ಒಂದೂವರೆ ಲಕ್ಷ ಜನ ನಿರಾಶ್ರಿತರು—ಹಿಂದೂಗಳು ಮುಸಲ್ಮಾನರ ಮೇಲೆ, ಮುಸಲ್ಮಾನರು ಹಿಂದೂಗಳ ಮೇಲೆ ದೂರುಗಳನ್ನು ಹೇಳಿ ಜನರಲ್ಲಿ ಉದ್ರೇಕಗೊಳಿಸುತ್ತಿದ್ದಾರೆ, ಗಲಭೆ ಎಬ್ಬಿಸುತ್ತಿದ್ದಾರೆ. ಪಂಜಾಬಿನಲ್ಲಿ ಜನರೇನೋ ಬಹಳ ಕಷ್ಟಕ್ಕೆ ಸಿಕ್ಕಿದ್ದಾರೆ. ಪಂಡಿತ ಜವಹರಲಾಲರು ಪಂಜಾಬಿಗೆ ಹೋಗಿದ್ದವರು ಬಂದು ನಮ್ಮ ಪಾರ್ಟಿ ಮೀಟಿಂಗ್‌ನಲ್ಲಿ ಅಲ್ಲಿನ ದುರಂತ ಚಿತ್ರವನ್ನು ವಿವರಿಸಿದರು. ಲಾಹೋರಿನಲ್ಲಿ ೩ ಲಕ್ಷ ಹಿಂದೂಗಳು ಸಿಕ್ಕರು ಇದ್ದರು. ಈಗ ೧೫-೨೦ ಸಾವಿರಕ್ಕಿಂತ ಹೆಚ್ಚು ಇಲ್ಲವಂತೆ. ಮುಸಲ್ಮಾನರು ಹಿಂದೂ ಸಿಕ್ಕರ ಮನೆಗಳನ್ನೆಲ್ಲ ಸುಟ್ಟಿದ್ದಾರೆ. ಆಸ್ತಿಯನ್ನೆಲ್ಲ ಲೂಟಿ ಮಾಡಿದ್ದಾರೆ. ಅದೇ ರೀತಿ ಹಿಂದೂಗಳು ಸಿಕ್ಕರು ಅಮೃತಸರದಲ್ಲಿ ಮುಸಲ್ಮಾನರಿಗೆ ತೊಂದರೆ ಕೊಟ್ಟಿದ್ದಾರೆ. ಪೂರ್ವ ಪಂಜಾಬಿನ ಮುಸಲ್ಮಾನರು ಪಶ್ಚಿಮ ಪಂಜಾಬಿಗೆ ಹೋಗಿ ದೂರು ಹೇಳಿಕೊಳ್ಳುವದು, ಪಶ್ಚಿಮ ಪಂಜಾಬಿನ ಹಿಂದೂ ಸಿಕ್ಕರು ಪೂರ್ವ ಪಂಜಾಬಿಗೆ ಬಂದು ಗೋಳು ಹೇಳಿಕೊಳ್ಳುವದು—ಅವರ ಕಥೆ ಕೇಳಿ ಜನ ಹುಚ್ಚೆದ್ದು ರೊಚ್ಚು ತೀರಿಸಿಕೊಳ್ಳುವುದು. ಮುಸಲ್ಮಾನರು ರೈಲು ನಿಲ್ಲಿಸಿ ಹಿಂದೂಗಳನ್ನು ಕೊಲ್ಲುವುದು—ಹಿಂದೂಗಳು ರೈಲು ನಿಲ್ಲಿಸಿ ಮುಸಲ್ಮಾನರನ್ನು ಕೊಲ್ಲುವುದು. ಈ ರೀತಿ ಭೀಕರ ನಾಟ್ಯ ನಡೆದಿದೆ. ಲಕ್ಷಾಂತರ ಜನ ವಾಹನಸೌಕರ್ಯವಿಲ್ಲದೆ ಅಲ್ಲಲ್ಲೆ ಮಿಲಿಟರಿಯವರ ರಕ್ಷಣೆಯಲ್ಲಿ ನಿರಾಶ್ರಿತರ ಬೀಡುಗಳಲ್ಲಿದ್ದಾರೆ. ರೈತರು ಮನೆ ಮಠ, ಹೊಲಗದ್ದೆ ಎಲ್ಲ ಬಿಟ್ಟು ತಲೆಹೊರೆ ಹೊತ್ತುಕೊಂಡು ಈ ಕಡೆ ಬರುತ್ತಿದ್ದಾರೆ. ಇದೆಲ್ಲ ಪಾಕಿಸ್ಥಾನದ ಫಲ! ನಮ್ಮ ದೇಶ ಎಂದು ಶಾಂತಿಯನ್ನು ಕಂಡೀತು ಎಂಬ ಯೋಚನೆ ಎಲ್ಲರನ್ನೂ ಬಾಧಿಸಹತ್ತಿದೆ. ನೆಹರೂ ಸರಕಾರ ನಿರಾಶ್ರಿತರ ಸಹಾಯಕ್ಕೆ ಪಶ್ಚಿಮ ಪಂಜಾಬಿನಿಂದ ಪೂರ್ವ ಪಂಜಾಬಿಗೆ ಬರುವವರಿಗೆ ಎಲ್ಲ ಸಹಾಯವನ್ನೂ ಮಾಡುತ್ತಿದ್ದಾರೆ. ನೆಹರೂರವರಿಗಂತೂ ಸ್ವಲ್ಪವೂ ಬಿಡುವಿಲ್ಲ. ವಿಧಾನ ಸಭೆಗೆ ಬಂದರಂತೂ

ಅರ್ಧ ಗಂಟೆ ಸಹ ಇರುವುದಿಲ್ಲ. ಈ ದಿನ ಬೆಳಿಗ್ಗೆ ಯಮುನಾ ಸ್ನಾನಕ್ಕೆಂದು ಹೋಗಿದ್ದೆ. ಹೊಸ ನೀರು ಬಂದು ಕೆಸರಾಗಿತ್ತು. ಆದ್ದರಿಂದ ಬರೀ ಪ್ರೋಕ್ಷಣೆಯಲ್ಲೆ ಸ್ನಾನ ಮುಗಿಯಿತು. ಪ್ರವಾಹ ವಿದ್ದರೂ ಯಮುನಾ ನದಿ ಬಹಳ ನಿದಾನವಾಗಿ ಹರಿಯುತ್ತ ಇತ್ತು. ಪ್ರವಾಹವಿಲ್ಲದಿದ್ದಾಗ ಪ್ರಾಯಶಃ ಹರಿಯುವುದೇ ಕಾಣಲಿಕ್ಕಿಲ್ಲವೇನೋ ಎಂಬಂತೆ ಇದೆ. ಅದಕ್ಕೇನೆ ದಾಸರು "ಸಾವಧಾನದಿ ಹರಿದಳು ಯಮುನಾ" ಎಂದು ಹಾಡಿರಬೇಕು. ಯಮುನಾ ತೀರಕ್ಕೆ ಬಂದು, ಆ ನದಿಯ ಮಂದಗಮನವನ್ನು ನೋಡಿ ಮುಗ್ಧರಾಗಿರಬೇಕು. ಶ್ರೀಕೃಷ್ಣನ ಚರಿತ್ರೆ ಎಲ್ಲ ಯಮುನೆಯ ಸುತ್ತಲೂ ಹೆಣೆದಿದೆ. ಆ ನದಿ ಯನ್ನು ನೋಡಿದಾಗ ಭಗವಾನ್ ಕೃಷ್ಣನ ಕಥೆಯೆಲ್ಲ ಜ್ಞಾಪಕಕ್ಕೆ ಬಂದಿತು. ಇಲ್ಲಿಯೇ ಎಲ್ಲೋ ಪಾಂಡವರು ಸ್ನಾನ ಮಾಡಲು ಯಮುನೆಗೆ ಬಂದಿರಬೇಕಲ್ಲವೆ? ಶ್ರೀಕೃಷ್ಣ ಇಲ್ಲಿಯೇ ಎಲ್ಲೋ ತನ್ನ ಮುರುಲಿಯನ್ನೂದುತ್ತ ಗೋವಳರೊಂದಿಗೆ ಕಾಳಿಂಗನ ಮರ್ದನ ಮಾಡಿರಬೇಕಲ್ಲವೇ? ಎಂಬ ಯೋಚನೆಗಳು ಹೊಳೆದವು. ಪುರಾಣ ಕಿಲ್ಲೆಯ ಗೋಡೆಯ ಬುಡದಲ್ಲಿರುವ ಮಾರ್ಗವಾಗಿಯೇ ನದಿಗೆ ಹೋದೆವು. "ಇಂದ್ರಪ್ರಸ್ಥ" ಎಂದು ಒಂದು ದೇವಸ್ಥಾನ. ಹೊರ ಗಡೆ ಗೋಡೆಯ ಮೇಲೆ ಪಂಚಪಾಂಡವರ ಚಿತ್ರಗಳು. ನಿಜವೋ ಸುಳ್ಳೋ? ನಿಜ ಏಕಿರಬಾರದು? ಅಲ್ಲಿಯೇ ಭೀಮಸೇನ ತನ್ನ ಗದೆಯನ್ನು ಬೀಸಿ ಅತಿಭಯಂಕರನಾಗಿ ಏಕೆ ಮೆರೆದಿರಬಾರದು?

೩೧-೮-೪೭ನೆ ರಾತ್ರಿ ಹರಿದ್ವಾರ, ಹೃಷಿಕೇಶಗಳಿಗೆ ಹೋಗಿ ಬರ ಬೇಕೆಂದಿದ್ದೇನೆ. ಸಂಜೆ ೬-೩೦ಗೆ ಹೊರಟರೆ ಬೆಳಿಗ್ಗೆ ೬-೩೦ಗೆ ರೈಲು ಹರಿದ್ವಾರಕ್ಕೆ ಹೋಗುತ್ತೆ. ೩ನೆ ರಾತ್ರಿ ಇಲ್ಲಿಂದ ಹೊರಟು ೫ನೆ ಬೆಳಿಗ್ಗೆ ಬೊಂಬಾಯಿ. ೫ನೆ ರಾತ್ರಿ ಹೊರಟು ೬ನೆ ಸಂಜೆ ಹರಿಹರ, ರಾತ್ರಿ ಮನೆ! ಪ್ರಾಯಶಃ ಹರಿಹರದಲ್ಲಿ ಹಿಡಿಯಲಾರರು. ಹಿಡಿದರೆ ಒಳ್ಳೆಯದೇ ಆಯಿತು. ಅದೂ ಒಂದು ಯಾತ್ರೆ. ನಾನು ಹೊರಡುವ ರೈಲು ಆಗ್ರಾಕ್ಕೆ ರಾತ್ರಿ ಹೋಗುತ್ತೆ. ಸಾಧ್ಯವಾದರೆ ೨ನೆ ತಾರೀಖು ಅಲ್ಲಿಗೆ ಹೋಗಲು ಪ್ರಯತ್ನ ಮಾಡುತ್ತೇನೆ.

೩೦-೮-೧೯೫೭

ಈ ದಿನ ಸಭೆಯು ಮುಗಿಯುವುದೆಂದು ಅಧ್ಯಕ್ಷರು ನಿನ್ನೆಯೇ ತಿಳಿಸಿದ್ದರು. ಇದ್ದಕ್ಕಿದ್ದಂತೆ ಸಭೆ ಮುಕ್ತಾಯವಾಯಿತು. ಇನ್ನೂ ಎರಡು ದಿನ ನಡೆಯಬಹುದೆಂದು ನಾನು ೩-೯-೫೭ನೆ ದಿನ ರೈಲಿನಲ್ಲಿ ಹೊರಡಲು ಟಿಕೆಟ್ ತೆಗೆದುಕೊಂಡಿದ್ದೇನೆ. ಈ ಎರಡು ಮೂರು ದಿನ ಏನು ಮಾಡಬೇಕೆಂಬುದೇ ಸಮಸ್ಯೆಯಾಗಿದೆ.

೨-೯-೫೭

೩೦-೮-೫೭ನೆ ಸಂಜೆ ನಿಜಲಿಂಗಪ್ಪನವರ ಬಂಗಲೆಗೆ ಹೋಗಿದ್ದೆ. ಅವರ ಕುಟುಂಬ ಶ್ರೀಮತಿ ಮುರಿಗೆಮ್ಮ ಇಲ್ಲಿಯೇ ಇದ್ದಾರೆ. "ಹರಿ ದ್ವಾರಕ್ಕೆ ಹೋಗಿಬರೋಣವೆಂದಿದ್ದಾರೆ. ಜತೆ ಇಲ್ಲ. ಯಾರಾದರೂ ಹೋಗುವವರಿದ್ದರೆ ಕಳುಹಿಸೋಣವೆಂದಿದ್ದೇನೆ" ಎಂದರು. ನಿಜ ಲಿಂಗಪ್ಪ, ತಮಗೂ ಹರಿದ್ವಾರದ ಯಾತ್ರೆ ಮಾಡಬೇಕೆಂಬ ಹಂಬಲು ಇತ್ತು. ಬಂಗಾಲದ ಎರಡು ಮೂರು ಜನ ಸ್ನೇಹಿತರೂ ಬರಬೇಕೆಂದಿದ್ದರು. ಆದರೆ ಹರಿದ್ವಾರದ ಮಾರ್ಗದಲ್ಲಿ ಹಿಂದೂ ಮುಸ್ಲಿಂ ಗಲಭೆಗಳಾಗುತ್ತಿವೆ. ಹೋಗಿಬರುವುದು ಕ್ಷೇಮವಲ್ಲ ಎಂದು ನಿಂತುಬಿಟ್ಟರು. ಸಂಜೆ ಕೊನ್ನಾಲ್ ಸರ್ಕಲ್ ಬಳಿ ಹೋಗುವಾಗ ಶ್ರೀ ಗೋಸಾವಿ ಕೃಷ್ಣರಾಯರು ಸಿಕ್ಕರು. ಅವರು "ನಿತ್ಯವೂ ಹರಿದ್ವಾರಕ್ಕೆ ಬಸ್‌ಗಳು ಓಡಾಡುತ್ತವೆ. ಏನೂ ಭಯವಿಲ್ಲ. ಬೇಕಾದರೆ ನಾನು ಜತೆಗೆ ಬರುತ್ತೇನೆ" ಎಂದರು. ಕೃಷ್ಣರಾಯರು ಧಾರವಾಡದವರು. ತೆಳ್ಳಗೆ ಕಡ್ಡಿಯಂತಹ ಮನುಷ್ಯ. ೩-೪ ಬಾರಿ ಬದರಿ, ಕೇದಾರನಾಥ, ಗಂಗೋತ್ರಿ ಯಾತ್ರೆ ಮಾಡಿದ್ದಾರೆ. ನಮಗೆ ಇನ್ನೂ ಅನುಕೂಲವಾಯಿತೆಂದೆವು. ಕೂಡಲೆ ಲ್ಯಾಂಡ್‌ಲೈನ್ಸ್ ಎಂಬ ಬಸ್ ಆಫೀಸಿಗೆ ಹೋಗಿ ಟಿಕೆಟ್ ತೆಗೆದುಕೊಂಡೆವು. ೩೧-೮-೫೭ ಶ್ರಾವಣ ಶುದ್ಧ ಪೌರ್ಣಿಮೆ—೮ ಗಂಟೆಗೆ ಸರಿಯಾಗಿ ಬಸ್ ದೆಹಲಿಯಿಂದ ಹೊರಟಿತು. ರಸ್ತೆಯು ಕೆಂಪುಕೋಟೆಯ ಮಗ್ಗುಲಲ್ಲಿ ಹಾದು ಯಮುನಾ ನದಿಯನ್ನು ದಾಟ ಮುಂದೆ ಹೋಗುತ್ತದೆ. ಇಲ್ಲಿ ಯಮುನಾ ನದಿಗೆ ಕಟ್ಟಿರುವ

ಸೇತುವೆ ರೈಲುಸಂಚಾರ, ವಾಹನ ಇತ್ಯಾದಿಗಳ ಸಂಚಾರ—ಎರಡಕ್ಕೂ ಉಪಯೋಗವಾಗುವಂತೆ ಕಟ್ಟಿದ್ದಾರೆ. ಮೇಲಿನ ಅಂತಸ್ತಿನಲ್ಲಿ ರೈಲುಗಳು ಓಡಾಡುತ್ತವೆ. ಕೆಳಗಿನ ಅಂತಸ್ತಿನಲ್ಲಿ ಗಾಡಿ, ಬಸ್ಸು, ಜನರು ಓಡಾಡಲು ಅನುಕೂಲವಿದೆ. ದೆಹಲಿಯಿಂದ ಹರಿದ್ವಾರಕ್ಕೆ ೧೩೦ ಮೈಲಿಗಳಾಗುತ್ತವೆ. ದಾರಿಯುದ್ದಕ್ಕೂ ಕಾಲುವೆಗಳು. ದೆಹಲಿಯಿಂದ ಖಚೌಲಿಯವರಗೆ ಯಮುನಾ ನದಿಯ ಕಾಲುವೆಗಳು. ಖಚೌಲಿಯಿಂದ ಹರಿದ್ವಾರವವರೆಗೆ ಗಂಗಾ ನದಿಯ ಕಾಲುವೆಗಳು. ದಾರಿಯುದ್ದಕ್ಕೂ—ದಿಗಂತದವರೆಗೂ ಗೋಧಿ, ಭತ್ತ, ಕಬ್ಬು, ಜೋಳ, ಜವೆಗೋದಿಯ ಹಸುರು ಹಾಸು. ಹೆಸರಿಗೆ ಒಂದು ದಿಣ್ಣೆಯನ್ನು ನೋಡಬಯಸಿದರೂ ಕಾಣುವುದಿಲ್ಲ. ಪ್ರಕೃತಿಯು ಹುಚ್ಚಿದ್ದು ತನ್ನ ಹೂ ಹಣ್ಣುಗಳಿಂದ, ಧನಧಾನ್ಯಗಳಿಂದ ಜನರನ್ನು ಸಂತುಷ್ಟಿಗೊಳಿಸಿದೆ. ರಸ್ತೆಯ ಪಕ್ಕದಲ್ಲೆ ರೈಲುದಾರಿ, ದಾರಿಯುದ್ದಕ್ಕೂ ಅಲ್ಲಲ್ಲಿ ಸಕ್ಕರೆ ಕಾರ್ಖಾನೆಗಳು. ನಾವು ಹೊರಡುವ ಮುಂಚೆ ಶ್ರೀ ದಿವಾಕರ ರಂಗರಾಯರು "ಹರಿದ್ವಾರದಲ್ಲಿ ಗಂಗಾಜಿಗೆ ನನ್ನ ನಮಸ್ಕಾರ ಹೇಳಿ" ಎಂದರು. "ಯಾವ ಗಂಗಾಜಿ" ಎಂದೆ. ಇಲ್ಲಿನ ಜನರು ಗಂಗೆಯನ್ನು 'ಗಂಗಾಜಿ—ಗಂಗಾಮಾತೆ' ಎಂದು ಕರೆಯುತ್ತಾರೆ. ನಮ್ಮ ಜನರು ಗಂಗೆ, ಯಮುನೆ ಮುಂತಾದ ಧ್ರುವ ನದಿಗಳಿಗೆ ಏಕ ಪವಿತ್ರತೆಯನ್ನು ಕಲ್ಪಿಸಿದರೆಂಬುದು ಅರ್ಥಗರ್ಭಿತವಿದೆ. ಉತ್ತರ ಹಿಂದೂಸ್ಥಾನವೆಲ್ಲ ಗಂಗೆ—ಯಮುನೆಯರ ಮಡಲಿನ ಬೈಲುಗಳು. ಭರತಖಂಡವನ್ನು ತಾಯತೋಳ ತೆಕ್ಕೆಯೊಳಗಿನ ಮಗುವಿನಂತೆ ನಲಸಿ ಬಳಸಿದ ನದಿಗಳು. ಎಲ್ಲ ದೇಶಗಳ ನಾಗರೀಕತೆಯು ನದಿಗಳ ಪಡದಲ್ಲಿಯೇ ಬೆಳೆದಿದೆ. ರಾಮಾಯಣ ಮಹಾಭಾರತದ ಕಥೆಗಳು, ಭಾಗವತದ ಕಥೆಗಳು ಗಂಗೆ ಯಮುನೆಯರ ತೀರದ ಸುತ್ತಲೂ ಹೆಣೆದ ಕಥೆಗಳು. ಇಲ್ಲಿನ ಜನರು ಕಷ್ಟವಾಸಿಗಳು. ಎಲ್ಲಿಯೂ ಒಂದು ಅಂಗುಲ ಬಂಜರು ಭೂಮಿ ಬೇಕೆಂದರೂ ಕಾಣುವುದಿಲ್ಲ. ಇಲ್ಲಿನ ಹಸುಗಳು, ಎತ್ತು ಎಮ್ಮೆಗಳು ಆನೆಯ ಗಾತ್ರ ಇವೆ. ಹೊತ್ತಿಗೆ ೮-೧೦ ಸೇರು ಹಾಲನ್ನು ಸುಲಭ

ವಾಗಿ ಕರೆಯುತ್ತಾರೆ. ರೂರ್ಕಿ ಪಟ್ಟಣದಿಂದ ೧೫ ಮೈಲಿ ದೂರದಲ್ಲಿರುವ ಖಚೌಲಿಯಿಂದ ಗಂಗಾ ನದಿಯ ಕಾಲುವೆ ಆರಂಭವಾಗುತ್ತದೆ. ಆ ಕಾಲುವೆಯೋ—ಒಂದು ಮೈಯುಬ್ಬಿನ ತುಂಬು ಜವ್ವನದ—ಸಣ್ಣ ನದಿಯಂತೆ ಇದೆ. ರೂರ್ಕಿ ಒಂದು ಪ್ರಸಿದ್ಧವಾದ ಪಟ್ಟಣ. ಇಲ್ಲಿಯೇ ಪ್ರಸಿದ್ಧವಾದ ಇಂಜಿನಿಯರಿಂಗ್ ಕಾಲೇಜ್ ಇದೆ. ಗಣಿತಶಾಸ್ತ್ರದ ಸಲಕರಣೆಗಳನ್ನು (Mathematical Instruments) ತಯಾರು ಮಾಡುವ ಕಾರ್ಖಾನೆ ಇದೆ. ರೂರ್ಕಿಯಿಂದ ಹರಿದ್ವಾರದವರೆಗೂ ಗಂಗಾ ನದಿಯ ಕಾಲುವೆಯ ದಡದ ಮೇಲೆಯೇ ರಸ್ತೆಯು ಹೋಗುತ್ತದೆ. ಕಾಲುವೆಯನ್ನು ದಾಟುವಾಗ ಎರಡು ಕಡೆಯೂ ಎರಡು ದೊಡ್ಡ ಸಿಂಹಗಳನ್ನು ಮಾಡಿ ಕೂಡಿಸಿದ್ದಾರೆ. ಕಾಲುವೆಗಳನ್ನು ತೋಡುವಾಗ ಕೆಲವು ಕಡೆ ನದಿಗಳ ಕೆಳಗೆ ಕಾಲುವೆಗಳನ್ನು ತೋಡಿದ್ದಾರೆ. ಇನ್ನು ಕೆಲವು ಕಡೆ ಕಾಲುವೆಯ ಕೆಳಗೆ ನದಿಗಳು ಹರಿಯುತ್ತವೆ. ದಾರಿಯುದ್ದಕ್ಕೂ ಕಣ್ಮನಗಳನ್ನು ತಣಿಯುವ ನೋಟ! ಆದರೆ ನಗರಗಳಲ್ಲಿ ಬಹಳ ಹೊಲಸು. ಎಲ್ಲಿ ನೋಡಿದರೂ ಮೈಮುತ್ತುವ ನೊಣಗಳು. ದಾರಿಯಲ್ಲಿ ಘಾಸಿಯಾಬಾದ್, ಮೀರತ್, ಮುಝಫರ್‌ನಗರ, ದೇವ್‌ಬಂದ್, ರೂರ್ಕಿ ನಗರಗಳು ಸಿಗುತ್ತವೆ. ಮೀರತ್ ದೊಡ್ಡ ನಗರ. ಮೀರತ್, ರೂರ್ಕಿ ಸ್ವಲ್ಪ ಶುಚಿಯಾಗಿವೆ. ಉಳಿದ ನಗರಗಳಲ್ಲಿ ಕೊಳೆ ಹೆಚ್ಚು.

ನಾವು ಹರಿದ್ವಾರವನ್ನು ಸೇರಿದಾಗ ೨-೩೦ ಗಂಟೆ. ಹರಿದ್ವಾರ ಹಿಂದೂ ಸಂಸ್ಕೃತಿಯ ಕೇಂದ್ರ. ಭಾರತದ ಎಲ್ಲ ಸನಾತನ ಧರ್ಮಗಳ, ಮಠಗಳ ಶಾಖೆಗಳು ಇಲ್ಲಿ ಇವೆ. ದಾರಿಯಲ್ಲೇ ಸ್ವಾಮಿ ಶ್ರದ್ಧಾನಂದರು ಸ್ಥಾಪಿಸಿದ ಕಾಂಗ್ರಿ ಗುರುಕುಲ, ರಾಮಕೃಷ್ಣ ಆಶ್ರಮ, ವೇದಿಕ್ ಕಾಲೇಜ್, ಆಯುರ್ವೇದ ವಿದ್ಯಾಪೀಠ ಮುಂತಾದ ಸಂಸ್ಥೆಗಳಿವೆ. ಪ್ರತಿಯೊಂದು ಮನೆಯೂ ಒಂದು ಧರ್ಮಛತ್ರ. ಎಲ್ಲಿ ನೋಡಿದರೂ ಯಾತ್ರಿಕರು, ನಿರಾಶ್ರಿತರು. ಸಾಮಾನ್ಯವಾಗಿ ಹರಿದ್ವಾರದ ಜನಸಂಖ್ಯೆ ಅಂದರೆ ಅಲ್ಲಿಯೇ ನೆಲೆಸಿರುವವರು ೧೦೦೦೦ವಂತೆ. ಈಗ ಸುಮಾರು

೬೦ ಸಾವಿರ. ೫೦ ಸಾವಿರ ಜನರು ನಿರಾಶ್ರಿತರು. ಇಂಡಿಯಾ ಸರಕಾರದವರು ಒಂದು ನಿರಾಶ್ರಿತರ ಶಿಬಿರವನ್ನು ನಡೆಸುತ್ತಿದ್ದಾರೆ. ಪಂಡಿತ ಜವಹರಲಾಲ್ ನೆಹ್ರೂ ಮತ್ತು ಗಾಂಧೀಜಿ ಶಿಬಿರವನ್ನು ನೋಡಲು ಬಂದಿದ್ದರು. ಛತ್ರಗಳ ಕಟ್ಟೆಯ ಮೇಲೆ ರೈಲ್ವೆ ಪ್ಲಾಟ್‌ಫಾರಂ ಮೇಲೆ, ಮರದ ನೆರಳಿನಲ್ಲಿ ಎಲ್ಲಿ ನೋಡಿದರೂ ನಿರಾಶ್ರಿತ ಹಿಂದೂಗಳು, ಸಿಕ್ಕರು! ಹೈದರಾಬಾದಿನ ಸಾಹುಕಾರನೊಬ್ಬನು ಕಟ್ಟಿಸಿದ ಛತ್ರದಲ್ಲಿ ದಾಕ್ಷಿಣ್ಯವನ್ನು ಖರ್ಚುಮಾಡಿ ಮೂರನೆಯ ಮಹಡಿಯಲ್ಲಿ ಒಂದು ಕೋಣೆಯನ್ನು ಸಂಪಾದಿಸಿ, ಸಾಮಾನುಗಳನ್ನು ಅಲ್ಲಿ ಹಾಕಿ, ಗಂಗಾ ನದಿಗೆ ಸ್ನಾನಕ್ಕೆ ಹೊರಟೆವು. ನದಿಯ ದಡ ಸೇರುವವರೆಗೆ ನದಿ ಎಲ್ಲಿದೆ ಎನ್ನುವುದೇ ಗೊತ್ತಾಗುವುದಿಲ್ಲ. ಘಾಟ ಇಳಿಯುವ ಸ್ಥಳದಲ್ಲೇ ದೇವರ ಗುಡಿಗಳು—ಎಲ್ಲ ದೇವರಿಗೂ ಒಂದೊಂದು—ಒಂದೊಂದು ಮಠದವರಿಗೂ ಒಂದೊಂದು. ಇಲ್ಲಿ ದೇವರುಗಳೂ ಜಾಗಕ್ಕಾಗಿ ಕಾದಾಡಿದಂತೆ ಇದೆ! ಗುಡಿಗಳು ಬಹಳ ಸಂಕುಚಿತವಾಗಿವೆ. ದಕ್ಷಿಣ ಹಿಂದೂಸ್ಥಾನದ ವಿಶಾಲವಾದ, ಕಲಾಕೃತಿಗಳಾದ—ತಿರುಪತಿ, ಶ್ರೀರಂಗ, ಕಂಚಿ, ನಂಜನಗೂಡು, ಶ್ರೀರಂಗಪಟ್ಟಣ, ಹಳೇಬೀಡು, ಬೇಲೂರು, ಹಂಪೆಯ ದೇವಾಲಯಗಳ ಭವ್ಯತೆಯನ್ನು ನೋಡಿದರೆ ಆ ನೋಟವೇ ಹೃದಯದಲ್ಲಿ ಭಕ್ತಿಭಾವನೆಯನ್ನು ಮೂಡಿಸುತ್ತದೆ. ಗುಡಿಗಳಲ್ಲಿನ ದೇವರು ಅಮೃತಶಿಲೆಯ ಸಣ್ಣ ವಿಗ್ರಹಗಳು. ಇಂದಿನ ಭಾರತೀಯರ ಮನಸ್ಸಿನಂತೆ ದೇವರುಗಳೂ ವಾಮನರೂಪಿಗಳಾಗಿದ್ದಾರೆ. ಘಟ್ಟಕ್ಕೆ ಇಳಿಯುವ ಮೆಟ್ಟಲು ಪಕ್ಕದಲ್ಲೆ ಶೃಂಗೇರಿ ಮಠದವರ ಶಾರದಾ ದೇವಿಯವರ ಗುಡಿ ಇದೆ. ಅಲ್ಲಿನ ಅರ್ಚಕರು ಶೃಂಗೇರಿಯ ಅಣ್ಣಪ್ಪಯ್ಯನವರು. ಕನ್ನಡಿಗರೊಬ್ಬರನ್ನು ಕಂಡು ಮಹದಾನಂದ ವಾಯಿತು. ನಮ್ಮೂರಿನ ಶ್ರೀ ವೆಂಕಟಸುಬ್ಬಾಶಾಸ್ತ್ರಿಗಳು ಮತ್ತು ಸುಂದರಂ ಅಯ್ಯರ್ ಪರಿಚಯ ಹೇಳಿದರು. ಶಾರದಾದೇವಿಯವರಿಗೆ ಮಂಗಳಾರತಿ ಮಾಡಿಸಿದೆವು. ಆದರೆ ಇಲ್ಲಿ ನಮ್ಮ ಮನಸ್ಸು ಅಷ್ಟಾಗಿ ದೇವರ ಮೇಲೆ ಇರುವುದಿಲ್ಲ. ರಭಸದಿಂದ ಗಂಭೀರವಾಗಿ ಹರಿದೋಡುವ ಗಂಗೆ, ಸ್ನಾನಕ್ಕಾಗಿ ಬಂದಿರುವ ಸಹಸ್ರಾರು ಜನರ

ಜಂಗುಳಿಯ ಮೇಲೆ ಹೋಗುತ್ತದೆ. ನದಿಗಿಳಿಯಲು ಶಾರದಮ್ಮನವರ ಗುಡಿಸಲು. ಪಕ್ಕದಲ್ಲೇ ಇಕ್ಕಟ್ಟಾದ ಮೆಟ್ಟಲು—ನುಗ್ಗಿಕೊಂಡು ಇಳಿಯ ಬೇಕು. ಎದುರಿಗೇನೆ ಭೀಮಕುಂಡ. ಇಲ್ಲಿ ಸ್ನಾನ ಮಾಡಿದರೇನೆ ಪುಣ್ಯ ಎಂದು ಪ್ರತೀತಿ. ಭೀಮಕುಂಡ ದಾಟಲು ಒಂದು ಸೇತುವೆ, ಅದರಾಚೆ ವಿಶಾಲವಾದ ಸ್ನಾನಘಟ್ಟ. ನಾಲ್ಕು ಗಂಟೆಯಾಗಿದ್ದರೂ ಜನ ಕಿಕ್ಕಿರಿದು ತುಂಬಿದ್ದರು. ಸ್ನಾನಮಾಡುವವರು, ಸಂಕಲ್ಪ ಹೇಳುವವರು, ಶ್ರಾದ್ಧ ಮಾಡುವವರು, ಮಾಡಿಸುವವರು, ಹರಿಕಥೆ, ಭಜನೆ, ಪುರಾಣ ಪುಣ್ಯಕಥೆಗಳು, ಹಸ್ತಸಾಮುದ್ರಿಕೆ ನೋಡುವವರು, ಆಸನಗಳನ್ನು ಹಾಕುತ್ತಿರುವ ಬೈರಾಗಿಗಳು—ಇದನ್ನೆಲ್ಲ ನೋಡಲು ಬಂದವರು. ಎಲ್ಲಿ ನೋಡಿದರೂ ನಿಲ್ಲಲು ಸಹ ಸ್ಥಳವಿಲ್ಲ. ಹೇಗೋ ಅಂತೂ ಜಾಗಮಾಡಿಕೊಂಡು, ಸ್ನಾನ ಮಾಡಿದೆವು. ಇಲ್ಲಿ ಹರಿಯುವುದು ಮೂಲ ನದಿಯಲ್ಲ. ಗಂಗಾ ನದಿಯ ವೇಗ ಬಹಳ. ನೀರಿನ ಆಳ ಸೊಂಟದುದ್ದ ಇದ್ದರೂ ಎರಡು ಮೆಟ್ಟಲು ಇಳಿದರೆ ಸಾಕು ಕೊಚ್ಚಿಕೊಂಡು ಹೋಗುತ್ತದೆ. ಸ್ನಾನ ಮಾಡುವವರಿಗೆ ಅನುಕೂಲ ವಾಗಲೆಂದು ಮೇಲೆ ಸ್ವಲ್ಪ ದೂರದಲ್ಲಿ ಗಂಗಾನದಿಗೆ ಅಣೆಕಟ್ಟು ಹಾಕಿ ನಾಲೆಯನ್ನು ಮಾತ್ರ ಇಲ್ಲಿ ತಂದಿದ್ದಾರೆ. ಆ ನಾಲೆಯ ಒಂದು ಸಣ್ಣ ಭಾಗ ಭೀಮಕುಂಡ. ಇನ್ನೊಂದು ಭಾಗ ಸ್ನಾನಘಟ್ಟದ ಆಚೆ ಹರಿಯುತ್ತದೆ. ಎರಡರಲ್ಲೂ ಸೊಂಟದವರೆಗೆ ಮಾತ್ರ ನೀರು. ನೀರು ಹೆಚ್ಚಾದರೆ, ಹೆಚ್ಚಾದ ನೀರು ಹರಿದು ಹೋಗುವಂತೆ ಆಚೆ ದಡದಲ್ಲಿ ಒಂದು ಕೋಡಿಯನ್ನು ಕಟ್ಟಿ, ನೀರನ್ನು ಒಂದೇ ಮಟ್ಟದಲ್ಲಿ ಹರಿಯುವಂತೆ ಮಾಡಿದ್ದಾರೆ. ಗಂಗೆಯು ಹಿಮವತ್ಪರ್ವತದ ಗರ್ಭ ದೊಳಗಿಂದ ಇಲ್ಲಿಗೆ ನೀವತ್ತು ಮೈಲಿ ದೂರದಲ್ಲಿರುವ ಹೃಷಿಕೇಶದಲ್ಲಿ ಹೊರಬೀಳುವುದರಿಂದ ನೀರು ಬಹಳ ತಣ್ಣಗಿರುತ್ತದೆ. ಪ್ರಾಯಶಃ ಉಷ್ಣಾಂಶ ೪೦ ಡಿಗ್ರಿ ಇರಬಹುದು. ಸ್ನಾನಕ್ಕೆ ಇಳಿಯಲು ಮನಸ್ಸು ಮಾಡುವುದು ಕಷ್ಟ. ಆದರೆ ಒಮ್ಮೆ ನೀರಿಗೆ ಇಳಿದರೆ ಮೇಲೆ ಬರಲು ಮನಸ್ಸು ಬರುವುದಿಲ್ಲ. ಅಷ್ಟು ಆಹ್ಲಾದಕರವೂ, ಹಿತವೂ ಇದೆ. ನಮ್ಮ ೧೩೦ ಮೈಲಿ *ಬಸ್ ಪ್ರಯಾಣದ ಆಯಾಸವೆಲ್ಲ ಪರಿಹಾರ

ವಾಯಿತು. ಸ್ನಾನಮಾಡಿ, ಸ್ವಲ್ಪ ಫಲಹಾರ ಮಾಡಿಕೊಂಡು, ಒಂದು ಗಾಡಿಯನ್ನು ತೆಗೆದುಕೊಂಡು ಕಾಂಗ್ರಿ ಗುರುಕುಲಕ್ಕೆ ಹೋದೆವು.

ಅದು ಒಂದು ವಿದ್ಯಾಪೀಠ. ಸ್ವಾಮಿ ಶ್ರದ್ಧಾನಂದರು ಸ್ಥಾಪಿಸಿದ್ದು. ಗಂಗಾನದಿಯ ಒಂದು ಕಾಲುವೆಯ ದಡದ ಮೇಲೆ ಊರಿಗೆ ಸ್ವಲ್ಪ ದೂರ ದಲ್ಲಿದೆ. ಈಗ ೩೦೦೦ ಜನ ವಿದ್ಯಾರ್ಥಿಗಳು ಓದುತ್ತಿದ್ದಾರೆ. ಶಿಕ್ಷಣವೆಲ್ಲ ಹಿಂದಿ ಮತ್ತು ಸಂಸ್ಕೃತದಲ್ಲಿ. ಶ್ರಾವಣಿಯಾದ್ದರಿಂದ ನಾವು ಹೋದಾಗ ಸುಮಾರು ೫೦೦ ಜನ ವಟುಗಳು ಅಗ್ನಿಕಾರ್ಯ ಮಾಡು ತ್ತಿದ್ದರು. ಆ ಸಾಮೂಹಿಕ ವೇದಘೋಷಣೆಯನ್ನು ಕಂಡು ಹಿಂದಿನ ಋಷಿಗಳ ಆಶ್ರಮದ ಕಲ್ಪನೆ ಬಂದಿತು. ಇಲ್ಲಿ ಬಿರ್ಲಾಗಳು ಒಂದು ವೇದಭವನವನ್ನು ಕಟ್ಟಿಸಿಕೊಟ್ಟಿದ್ದಾರೆ. ಗೋಡೆಯ ಮೇಲೆ ವೇದ ಕಥೆಗಳನ್ನು ಉಪನಿಷತ್ಕಥೆಗಳನ್ನು—ಆ ವೇದೋಪನಿಷತ್ ವಾಕ್ಯ ಗಳೊಡನೆ ವರ್ಣಚಿತ್ರಗಳನ್ನು ಬರೆಸಿದ್ದಾರೆ. ವಿಶಾಲವಾದ ಮೈದಾನ, ಸುತ್ತಲೂ ಗಿಡಮರಗಳು, ಗಂಗಾ ನದಿಯ ಕಾಲುವೆಗಳು, ಬೆಟ್ಟದ ತಪ್ಪಲು—ನಿಜವಾದ ಪ್ರಕೃತಿ ಸೌಂದರ್ಯದ ಬೀಡಿನಲ್ಲಿ ಈ ಆಶ್ರಮವನ್ನು ಕಟ್ಟಿದ್ದಾರೆ. ತ್ರಿವರ್ಣದವರಿಗೆ ಮಾತ್ರ ಇಲ್ಲಿ ಪ್ರವೇಶವಿದೆ. ಚಿಕ್ಕ ವಯಸ್ಸಿನಿಂದಲೇ ಸೇರಬೇಕು—ಮಧ್ಯೆ ಸೇರಿಸುವುದಿಲ್ಲ.

ಒಂದು ಗಂಟೆಯ ಕಾಲ ಅಲ್ಲಿ ಸುತ್ತಾಡಿ, ಪುನಃ ಗಂಗಾ ಘಾಟಿಗೆ ಬಂದೆವು. ಆಗ ಸಂಜೆ ಏಳು ಗಂಟೆ ಇರಬಹುದು. ಶ್ರಾವಣ ಪೂರ್ಣಿಮೆ ಎಂದು ನಿನಗೆ ಮೊದಲೇ ತಿಳಿಸಿದ್ದೇನೆ. ಶ್ರೀ ಬೇಂದ್ರೆ ಯವರ "ತೇಲಿಬಿಟ್ಟೆವು" ಎಂಬ ಕವನವನ್ನು ನಾದಲೀಲೆಯಲ್ಲಿ ಓದಿದ್ದೀಯಷ್ಟೆ. ಇಲ್ಲಿಯೂ ದೀಪೋತ್ಸವ. ಗಂಗೆಯ ಉಬ್ಬಿದ ಎದೆಯ ಮೇಲೆ ಅಸಂಖ್ಯಾತ ಜನರು ತೇಲಿಬಿಟ್ಟ ದೀಪಗಳ ಸಾಲು! ಹೆಂಗಸರು, ಮಕ್ಕಳು, ದೊಡ್ಡವರು, ಚಿಕ್ಕವರು ಎಲ್ಲರೂ ಒಂದೊಂದು ಮುತ್ತುಗದ ಎಲೆಯ ಬುಟ್ಟಿಯಲ್ಲಿ ಹೂ ತುಂಬಿ, ದೀಪ ಹಚ್ಚಿ ಗಂಗೆಯ ಪ್ರವಾಹದಲ್ಲಿ ತೇಲಿಬಿಡುವವರೇ. ನಾನೂ ಒಂದು ಬುಟ್ಟಿ ಹೂವನ್ನು ತೆಗೆದುಕೊಂಡು ನಿನ್ನ ತಾಯಿಯ ಹೆಸರಿನಲ್ಲಿ ತೇಲಿಬಿಟ್ಟೆ. ಈ ಕಡೆ ಘಟ್ಟದ ಮೇಲೆ

ಗೋಗ್ರಾಸ. ಅರಳು ಉಂಡೆಗಳನ್ನು ಮಾಡಿ ಮಾರಲು ತಂದಿರುತ್ತಾರೆ. ಆಣೆಗೆ ಆರು—ಎಂಟು. ಆ ಉಂಡೆಗಳನ್ನು ಕೊಡದ ಹೊರತು ಹಸುಗಳು ದಾರಿಯನ್ನೇ ಬಿಡುವುದಿಲ್ಲ. ಒಂದೊಂದು ಹಸುವೂ ಒಂದೊಂದು ಬೆಟ್ಟಾನೆಯಂತೆ ಇದೆ. ಕಣ್ಮನ ತಣಿಯುವವರೆಗೂ ಈ ದೃಶ್ಯವನ್ನು ನೋಡಿ ತಿರುಗಲಾರದೆ ನಮ್ಮ ಛತ್ರಕ್ಕೆ ಹಿಂದಿರುಗಿದೆವು. ದಾರಿಯಲ್ಲೇ ಒಂದು ಹೋಟೆಲಿನಲ್ಲಿ ಊಟ. ನಮ್ಮೂರಿನ ಸಿಲ್ವರ್ ಸೈಕಲ್ ಷಾಪಿ ನಂತಹ ಒಂದು ಮಳಿಗೆ. ಅಲ್ಲಿಯೇ ಒಲೆ—ಅಲ್ಲಿಯೇ ಊಟ. ಅಲ್ಲಿ ಊಟ ಮಾಡಲಾರದವರು ಬೀದಿಯಲ್ಲಿ ಬೆಂಚು ಹಾಕಿಕೊಂಡು ಅದರ ಮೇಲೆ ಊಟ ಪೂರೈಸುತ್ತಾರೆ. ಹೊಟ್ಟೆ ಕಾದಿತ್ತು. ಒಳಗೆ ಹೊಗೆ ಯಲ್ಲಿ ಅವನು ಕೊಟ್ಟ ಊಟ ಮಾಡಿ ಛತ್ರಕ್ಕೆ ಬಂದೆವು. ಹೊರಗೆ ಮಲಗಿದ್ದರೂ ಅಸಾಧ್ಯ ಸೆಕೆ. ಮಾರನೆ ಬೆಳಿಗ್ಗೆ ೫-೩೦ರ ರೈಲಿನಲ್ಲಿ ಋಷಿಕೇಶಕ್ಕೆ ಹೊರಡಬೇಕಾಗಿತ್ತು. ರಾತ್ರಿ ೧೦ ಗಂಟೆ ಬಾಗಿಲು ಬೀಗ ಹಾಕಿದರೆ ೬ ಗಂಟೆಯವರೆಗೆ ತೆಗೆಯುವುದಿಲ್ಲವೆಂದು ತಿಳಿಯಿತು. ನಿರಾಶ್ರಿತರು ಬಹಳ ಜನರು ಬಂದಿರುವುದರಿಂದ ಕಳ್ಳತನಗಳು ಹೆಚ್ಚಾಗಿವೆ ಎಂದೂ ಆದ್ದರಿಂದ ಈ ಎಚ್ಚರ ತೆಗೆದುಕೊಳ್ಳಬೇಕಾಗಿದೆ, ಮೊದಲು ಬಾಗಿಲುಗಳನ್ನು ಹಾಕುತ್ತಿರಲಿಲವೆಂದೂ, ಈಗ ಆ ನಿಯಮ ವನ್ನು ಬದಲಾಯಿಸಿರುವುದರಿಂದ ಬೆಳಿಗ್ಗೆ ೬ ಗಂಟೆಗೆ ಮುಂಚೆ ಬಾಗಿಲು ತೆಗೆಯಲು ಸಾಧ್ಯವಿಲ್ಲವೆಂದೂ, ವ್ಯವಸ್ಥಾಪಕರ ಅನುಜ್ಞೆಯಾಗ ಬೇಕೆಂದೂ ತಿಳಿಯಿತು. ಈಗಲೇ ಹೊರಗೆ ಹೋಗಿ ರೈಲ್ವೆ ಸ್ಟೇಷನಲ್ಲಿ ಕಾಲಕಳೆಯಬೇಕು. ಅಥವ ರೈಲು ತಪ್ಪಿಸಿಕೊಳ್ಳಬೇಕು. ಒಳ್ಳೆಯ ಪೀಕಲಾಟಕ್ಕಿಟ್ಟುಕೊಂಡಿತು. ಕೊನೆಗೆ ನಾನೇ ಆ ವ್ಯವಸ್ಥಾಪಕರನ್ನು "ನಾನು ಭಾರತೀಯ ವಿಧಾನ ಪರಿಷತ್ತಿನ ಸದಸ್ಯ. ಬೆಳಗಿನ ರೈಲಿನಲ್ಲಿ ಋಷಿಕೇಶಕ್ಕೆ ಹೋಗಿ, ಸಂಜೆಯೇ ಹಿಂದಿರುಗಿ ದೆಹಲಿಗೆ ಹೋಗಬೇಕು. ಬೆಳಿಗ್ಗೆ ೫ ಗಂಟೆಗೆ ದಯವಿಟ್ಟು ಬಾಗಿಲ ತೆಗೆಸಿ" ಕೇಳಿದೆ. 'ವಿಧಾನ ಪರಿಷತ್ತಿನ ಸದಸ್ಯ' ಎಂದೊಡನೆ ಕಿವಿ ನೆಟ್ಟಗಾಯಿತು. "ಗೋರಕ್ಷಣೆಗೆ ಏನು ಮಾಡಿದ್ದೀರಿ, ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಮಾಡಲು ಏನು

ಮಾಡಿದ್ದೀರಿ, ಹೈದರಾಬಾದಿನಲ್ಲಿ ಹಿಂದೂಗಳಿಗೆ ಯಾವ ರಕ್ಷಣೆಯನ್ನು ಕೊಡುತ್ತೀರಿ? ಪಾಕಿಸ್ಥಾನದವರಂತೆ ನೀವು ಇಲ್ಲಿನ ಮುಸಲ್ಮಾನರನ್ನು ಏಕೆ ಓಡಿಸುವುದಿಲ್ಲ? ಮತಾತೀತ (ಸೆಕ್ಯೂಲರ್) ರಾಷ್ಟ್ರ ಎಂದು, ಪಾಕಿಸ್ಥಾನ ಎಂದು ನಿನ್ನೆ ಕೂಗುತ್ತಿದ್ದವರನ್ನು ಇಂದು ರಾಷ್ಟ್ರಭಕ್ತರೆಂದು ಹೇಗೆ ನಂಬುತ್ತೀರಿ, ನಿರಾಶ್ರಿತರಿಗೆ ಏನು ಮಾಡಿದ್ದೀರಿ? ಎಂದು ಪ್ರಶ್ನೆಗಳಮೇಲೆ ಪ್ರಶ್ನೆಗಳ ಸುರಿಮಳೆಯಾಯಿತು. ನನಗೆ ಹಿಂದಿ ಬರದು—ಆತನಿಗೆ ಇಂಗ್ಲಿಷ್ ಬರದು. ಕೊನೆಗೆ ನನ್ನ ಒಡಕು ಹಿಂದಿ ಯಲ್ಲೇ ಸಮಾಧಾನ ಹೇಳಿದೆ. ರಾಷ್ಟ್ರದ ಮುಂದೆ ನಿಂತಿರುವ ಜಟಿಲ ಸಮಸ್ಯೆಗಳನ್ನೂ, ಮಹಾತ್ಮರ ನೇತೃತ್ವದಲ್ಲಿ ಪಂಡಿತ್‌ಜಿ ಮತ್ತು ಸರದಾರರು ಕೈಗೊಂಡಿರುವ ಕಾರ್ಯಕ್ರಮಗಳನ್ನೂ, ನಮ್ಮ ರಾಜ್ಯಾಡಳಿತ ನೀತಿಯನ್ನು ತಿಳಿಸಿದೆ. ಆತ ನಿಷ್ಠನಾದ ವೈಷ್ಣವ ಭಕ್ತ. ಸನಾತನಿ ಹಿಂದೂ. ನನ್ನ ವಾದದಿಂದ ಪೂರ್ಣ ಸಮಾಧಾನವಾಗ ದಿದ್ದರೂ ಸ್ವಲ್ಪ ತೃಪ್ತಿಯಾಯಿತು. ಕೊನೆಗೆ ನನ್ನ ಹಿಂದಿ ಮಾತಿಗಾಗಿ ಬಹಳ ಸಂತೋಷಗೊಂಡ. ಬೆಳಿಗ್ಗೆ ೫ ಗಂಟೆಗೆ ಬಾಗಿಲು ತೆಗೆಯುವಂತೆ ದ್ವಾರಪಾಲಕನಿಗೆ ಆಜ್ಞೆಮಾಡಿ, ಭೇಟಿಕೊಟ್ಟವರ ಪುಸ್ತಕದಲ್ಲಿ ನನ್ನ ಬರೆಹ ಬರಸಿಕೊಂಡ. ಇದೆಲ್ಲ ಮುಗಿಯುವ ಹೊತ್ತಿಗೆ ೧೧ ಗಂಟೆ. ಆದರೂ ಬಂದು ಮಲಗಿದರೆ ನಿದ್ರೆ ಬಾರದು ಅಲ್ಲಿಯೇ ದೊಡ್ಡದಾದ ಭಜನೆ. ಯಾರೋ ಇಬ್ಬರು ಹೆಣ್ಣುಮಕ್ಕಳಿರ ಬೇಕು—ವೈಷ್ಣವ ಗೀತೆಗಳನ್ನು ಬಹಳ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಮೃದಂಗ, ತಾಳಮದ್ದಳೆ, ಸಿತಾರು, ತಂಬೂರಿಗಳ ಪಕ್ಕವಾದ್ಯ. ಪಲ್ಲವಿಯನ್ನು ಹಾಡಿ ನಿಲ್ಲಿಸಿದೊಡನೆ ಸಭಿಕರೆಲ್ಲರೂ ಸಾಮೂಹಿಕವಾಗಿ ಆ ಪಲ್ಲವಿಯನ್ನು ಹಾಡುವ ಮೇಳಗೀತ—ಬೆಳಗಿನ ಜಾವ ೧ ಗಂಟೆಯ ವರೆಗೆ ನಡೆದಿರಬಹುದು. ಭಜನೆ ಕೇಳುತ್ತ ನಿದ್ರೆ ಬಂದಿತು. ಎಚ್ಚತ್ತಾಗ ೪-೩೦ ಗಂಟೆ. ಬೆಳಿಗ್ಗೆ ೫ ಗಂಟೆಗೆ ರೈಲು ನಿಲ್ದಾಣಕ್ಕೆ ಹೊರಟರೆ—ಹೊರಡುವ ಹೊತ್ತಿಗೆ ೮ ಗಂಟೆ. ಹರಿದ್ವಾರದಿಂದ ಋಷಿ ಕೇಶ ೪೦ ಮೈಲಿಗಳು. ರೈಲುದಾರಿ ಶಿವಾಲಿಕ್ ಬೆಟ್ಟಗಳ ಸಾಲಿಗೂ,

ಹಿಮಾಲಯ ಪರ್ವತಶ್ರೇಣಿಗೂ ಮಧ್ಯೆ ಇರುವ ತಪ್ಪಲಿನಲ್ಲಿ ಓಡುತ್ತದೆ. ಶಿವಾಲಿಕ್ ಬೆಟ್ಟಗಳ ಉದ್ದ ಸುಮಾರು ೫೦೦ ಮೈಲಿಗಳು. ಹಿಮಾಲಯ ಪರ್ವತಶ್ರೇಣಿಯ ಉದ್ದ ೧೫೦೦ ಮೈಲಿಗಳು. ಭರತಖಂಡದ ಉತ್ತರದ ಗಡಿಯಲ್ಲಿ ಕಟ್ಟಿರುವ ಕೋಟೆಯಂತೆ ಹಬ್ಬಿದೆ. ಶಿವಾಲಿಕ್ ಪರ್ವತಶ್ರೇಣಿ ಸುಮಾರಾಗಿ ನಮ್ಮ ಪಶ್ಚಿಮ ಘಟ್ಟಗಳ ಶ್ರೇಣಿಯಂತೆ ಚಿಕ್ಕದು. ಅದೇ ಅರಣ್ಯದ ಸೊಬಗನ್ನು ಇಲ್ಲಿಯೂ ಕಾಣುತ್ತೇವೆ. ದರ್ಭೆಯ ಹುಲ್ಲು ಮಾತ್ರ ಒಂದು ಆಳು ಎತ್ತರ ಬೆಳೆದಿರುತ್ತದೆ. ಪ್ರಾಯಶಃ ಇಲ್ಲಿಯವರು ಅದರಿಂದ ಚಾಪೆ ಹೆಣೆಯುತ್ತಿರಬಹುದು. ಮಧ್ಯೆ ದಾರಿಯಲ್ಲಿ ಒಂದು ಸತ್ಯನಾರಾಯಣ ದೇವಸ್ಥಾನವಿದೆ—ರೈಲಿನಿಂದ ನೋಡಬಹುದು. ಹರಿದ್ವಾರದಿಂದ ಋಷಿಕೇಶದ ಮಾರ್ಗವಾಗಿ ಬದರಿ ಕಾಶ್ರಮ, ಕೇದಾರನಾಥಗಳಿಗೆ ಹೋಗುವ ದಾರಿಯೂ ಇದೇನೆ. ಕಾಳಾಕಂಬ್ಳಿವಾಲಾ ಎಂಬವನು ಸತ್ಯನಾರಾಯಣ ದೇವಸ್ಥಾನದಿಂದ ಹತ್ತು ಹತ್ತು ಮೈಲಿಗೆ ಬದರಿಯವರೆಗೆ ಒಂದೊಂದು ಛತ್ರ ಕಟ್ಟಿಸಿದ್ದಾನೆ. ಸಾಧುಸಂತರಿಗೆ ಸತ್ಯನಾರಾಯಣ ದೇವಸ್ಥಾನದಲ್ಲಿ ಚೀಟಿ ಪಡೆದರೆ ದಾರಿಯುದ್ದಕ್ಕೂ ಅವರಿಗೆ ಬಿಟ್ಟಿಯಾಗಿ ಊಟ ದೊರೆಯುತ್ತದೆ. ಇದೆಲ್ಲ ಕಂಬ್ಳಿವಾಲಾನ ಏರ್ಪಾಟು. ಎಷ್ಟು ಜನ ಯಾತ್ರಿಕರು ಆತನ ಹೆಸರನ್ನು ನೆನಸಿಕೊಳ್ಳುತ್ತಾರೋ? ಋಷಿಕೇಶದ ಹತ್ತಿರ ಬರುತ್ತಲೇ ದೂರದ ಬೆಟ್ಟದ ಮೇಲೆ ತಹರಿ ಘಡ್ವಾಲ ಸಂಸ್ಥಾನದ ಹೊಸ ರಾಜಧಾನಿಯು ಕಾಣುತ್ತದೆ. ಋಷಿಕೇಶ ಸೇರಿದಾಗ ೧೦ ಗಂಟೆ. ರೈಲ್ವೆ ಸ್ಟೇಷನಿಂದಲೇ ಎರಡು ಟಾಂಗಾಗಳನ್ನು ಗೊತ್ತುಮಾಡಿ ಕೊಂಡು (ಟಾಂಗ ೧ಕ್ಕೆ ೧೦ ರೂ.) ಊರೊಳಗೆ ಹೋಗಿ, ಸ್ವಲ್ಪ ಹೊಟ್ಟೆ ಭರ್ತಿಮಾಡಿಕೊಂಡು, ನೇರವಾಗಿ ಲಕ್ಷ್ಮಣಝೂಲಾಕ್ಕೆ ಹೊರಟೆವು. ನಿರಾಶ್ರಿತರು ಋಷಿಕೇಶವನ್ನೂ ಬಿಟ್ಟಿಲ್ಲ. ಸಾಮಾನ್ಯವಾಗಿ ಅಲ್ಲಿ ೩೦೦೦ ಜನರಿರುವ ಜಾಗದಲ್ಲಿ ಈಗ ೧೫೦೦೦ ಜನರಿದ್ದಾರೆ. ದಾರಿಯುದ್ದಕ್ಕೂ ಗಂಗಾ ನದಿಯ ಎರಡು ದಡದಲ್ಲೂ ದೇವಸ್ಥಾನಗಳು, ವಿದ್ಯಾಮಂದಿರ ಗಳು, ಆಶ್ರಮಗಳು, ಧರ್ಮಛತ್ರಗಳು. ಧನ್ವಂತರಿ ಆಶ್ರಮ, ಸ್ವರ್ಗಾ

ಶ್ರಮ, ಶಿವಾನಂದಾಶ್ರಮ—ಅಲ್ಲದೆ ಲೆಕ್ಕವಿಲ್ಲದಷ್ಟು ದೇವಸ್ಥಾನಗಳು. ಋಷಿಕೇಶ ದಾಟದೊಡನೆ ತೆಹರಿ ಘಡ್ವಾಲ್ ಗಡಿ ಬರುತ್ತದೆ. ಅಲ್ಲಿನ ಜನ ಕಡು ಬಡವರು. ಕುಷ್ಠರೋಗ ಅವರಲ್ಲಿ ಹೆಚ್ಚು. ದಾರಿಯುದ್ದಕ್ಕೂ ಸಾಲುಗಟ್ಟಿ ಕುಳಿತು ಭಿಕ್ಷೆ ಬೇಡುತ್ತಾರೆ. ಅಲ್ಲಿನ ಸರ್ಕಾರ ಅವರಿಗೆ ಯಾವ ಪರಿಹಾರವನ್ನೂ ಒದಗಿಸಿಲ್ಲ. ಲಕ್ಷ್ಮಣಝೂಲಾದಲ್ಲಿ ಒಂದು ತೂಗುವ ಕಬ್ಬಿಣದ ಸೇತುವೆ ಕಟ್ಟಿದ್ದಾರೆ. 'ಝೂಲಾ' ಎಂದರೆ ಉಯ್ಯಾಲೆ. ಈ ಸೇತುವೆಯ ಮೇಲಿಂದ ಗಂಗಾ ನದಿಯನ್ನು ದಾಟಿ ಆಚೆ ದಡಕ್ಕೆ ಹೋದರೆ ಬದರಿಗೆ ಹೋಗುವ ದಾರಿ ಸಿಗುತ್ತದೆ. ಸೇತುವೆ ಕಟ್ಟಿರುವ ಬಳಿ ಗಂಗಾ ನದಿಯು ಹಿಮಾಲಯ ಪರ್ವತದ ಕಿಬ್ಬಿಯೊಳಗಿಂದ ಹೊರನುಗ್ಗಿ ಮೈದಾನಪ್ರದೇಶವನ್ನು ಪ್ರವೇಶಿಸುತ್ತದೆ. ಎರಡು ಕಡೆಯೂ ಗಗನವನ್ನು ಭೇದಿಸುವ ದಟ್ಟವಾದ ವನಶ್ರೀಯ ಸೊಬಗಿನ ಗಿರಿಶಿಖರಗಳು, ಮಧ್ಯೆ ಘೋರ್ಗರೆಯುವ ಗಂಗಾಪ್ರವಾಹ, ದಡದ ಉದ್ದಕ್ಕೂ ಧರ್ಮಶಾಲೆಗಳು, ದೇವಾಲಯಗಳು, ಆಶ್ರಮಗಳು; ಸೇತುವೆ ಆಚೆ ಎಡ ದಡದ ಮೇಲೆ ಬದರಿಗೆ ಹೋಗುವ ದಾರಿ. ನಾವೂ ಆ ದಾರಿಯಲ್ಲಿ ಎರಡು ಮೈಲಿ ನಡೆದುಬಂದೆವು. ದಾರಿಯ ಆರಂಭದಲ್ಲೇ ಸತ್ಯನಾರಾಯಣನ ದೇವಸ್ಥಾನ. ಎದುರಿಗೇ ಗಂಗಾ ನದಿಯಲ್ಲಿ ಸ್ನಾನ ಮಾಡುವಾಗಲೇ ದೊಡ್ಡ ಮಳೆ ಬಂದಿತು. ಗಂಗೆಯ ನೀರಿನೊಡನೆ ಹೋಲಿಸಿದರೆ ಮಳೆನೀರು ಬಿಸಿನೀರಿನಂತೆ ಇತ್ತು. ನಮ್ಮ ಬಟ್ಟೆಗಳೆಲ್ಲ ತೊಯ್ದು ತೊಪ್ಪೆಯಾದರೂ ಅದು ಒಂದು ಆನಂದದ ಅನುಭವ. ಮಳೆ ನಿಂತೊಡನೆ ಹಿಂದಿರುಗಲು ಹೊರಟರೆ ಪುನಃ ಮಳೆಗೆ ಸಿಕ್ಕು ಒಂದು ಧರ್ಮಶಾಲೆಯಲ್ಲಿ ನಿಲ್ಲಬೇಕಾಯಿತು. ಅಲ್ಲಿ ಭಾವಲ್ಪುರದ ನಿರಾಶ್ರಿತರು ಇಬ್ಬರು ಅಣ್ಣತಮ್ಮಂದಿರು ಅವರ ಹೆಂಡತಿ ಮಕ್ಕಳು, ಅಕ್ಕ ತಂಗಿಯರು ಎಲ್ಲರೂ ಮಳೆಯಲ್ಲಿ ತೊಯ್ದು ನಿಂತಿದ್ದರು. ಭಾವಲ್ಪುರ ಒಬ್ಬ ನವಾಬನಿಗೆ ಸೇರಿದ ಸಂಸ್ಥಾನ. ಈಗ ಪಾಕಿಸ್ಥಾನಕ್ಕೆ ಸೇರಿದೆ. ಆತ ಸರ್ಕಾರಕ್ಕೆ ೫೦೦೦ ರೂಪಾಯಿ ಕಂದಾಯ ಕೊಡುವ ಜಮೀನು ದಾರನಂತೆ. ಹಿಂದೂ ಮುಸ್ಲಿಂ ಗಲಭೆಯಲ್ಲಿ ಎಲ್ಲವನ್ನೂ ಬಿಟ್ಟು

ಪೂರ್ವ ಪಂಜಾಬಿಗೆ ಬಂದು ನೆರಳಿಲ್ಲದೆ ಊರಿಂದೂರಿಗೆ ಅಲೆಯುತ್ತಿದ್ದ. "ನಮ್ಮ ತಂದೆ ತಾಯಿ ಊರಲ್ಲೇ ಇದ್ದಾರೆ. ಮೂರು ತಿಂಗಳಿಂದ ಒಂದು ಪತ್ರಕ್ಕೂ ಉತ್ತರವಿಲ್ಲ. ದೆಹಲಿಯಲ್ಲಿರುವ ಭಾವಲ್ಪುರ ನವಾಬನ ಅರಮನೆಯನ್ನು ಇಂಡಿಯಾ ಸರ್ಕಾರ ಭಾವಲ್ಪುರದ ನಿರಾಶ್ರಿತರಿಗೆ ಏಕೆ ವಾಸಕ್ಕೆ ಕೊಡಬಾರದು?" ಎಂದು ಕೇಳಿದ. ನಿರಾಶ್ರಿತರ ಸಹಾಯಕ್ಕಾಗಿ ಏರ್ಪಟ್ಟಿರುವ ಮಂತ್ರಿಗಳನ್ನು ನೋಡಲು ಸಲಹೆ ಮಾಡಿದೆ. ಮಳೆ ನಿಂತಮೇಲೆ ಹಿಂದಿರುಗಿದೆವು. ದಾರಿ ಯುದ್ದಕ್ಕೂ ಇಲ್ಲಿ ದೊಡ್ಡ ದೊಡ್ಡ ಕೋತಿಗಳಿವೆ. ಅವುಗಳಿಗೆ ಸ್ವಲ್ಪ ಕಡಲೇಕಾಯಿ, ಹುರಿಗಡಲೆ ಕೊಟ್ಟರೆ ಸರಿ, ಇಲ್ಲವಾದರೆ ಅಡ್ಡಬಂದು ಜೇಬನ್ನೇ ಝಡ್ತಿ ಮಾಡುತ್ತವೆ. ಕೈಯಲ್ಲಿ ಏನಿದ್ದರೂ ಕಿತ್ತುಕೊಂಡು ಹೋಗುತ್ತವೆ. ನಾವು ಋಷಿಕೇಶ ಸ್ಟೇಷನ್ಗೆ ಬಂದಾಗ ರೈಲು ಇನ್ನೂ ಹೊರಟಿರಲಿಲ್ಲ. ಅದೇ ರೈಲಿನಲ್ಲೇ ಹರಿದ್ವಾರಕ್ಕೆ ಹಿಂದಿರುಗಿದೆವು.

ರಾತ್ರಿ ರೈಲಿನಲ್ಲೇ ಹಿಂದಿರುಗಬೇಕಾಗಿತ್ತು. ಸ್ಟೇಷನ್ ಮಾಸ್ಟರನ್ನು ಕೇಳಿದರೆ ಒಂದು ವಾರಕ್ಕೆ ಮುಂಚೆಯೇ ಸ್ಥಾನಗಳೆಲ್ಲ—ರಿಸರ್ವ್ ಆಗಿವೆ. ಇನ್ನು ನಾಲ್ಕು ದಿನಗಳು ಸಿಗುವುದಿಲ್ಲ ಎಂದರು. ಪುನಃ ಕಾನ್ಸ್ಟಿಟ್ಯೂಯೆಂಟ್ ಅಸೆಂಬ್ಲಿ ಸದಸ್ಯ ಎಂದ ಮೇಲೆ ಡೆಹರಡೂನ್ಗೆ ಫೋನ್ ಮಾಡಿ ಎರಡು ಫಸ್ಟ್ ಕ್ಲಾಸ್—ನನಗೊಂದು ಶ್ರೀಪತಿ ಮುರಿಗೆಮ್ಮನವರಿಗೊಂದು ರಿಸರ್ವ್ ಮಾಡಿದರು. ರೈಲು ಹೊರಡಲು ಇನ್ನೂ ವೇಳೆ ಇದ್ದುದರಿಂದ ನದಿಯ ದಂಡೆಗೆ ಹೊರಟೆವು. ಈ ದಿನವೂ ದೀಪೋತ್ಸವ, ಗೋಗ್ರಾಸ, ಜನಗಳ ಪರಿಷೆ. ಹರಿದ್ವಾರದಲ್ಲಿ ಗಂಗಾತೀರದಲ್ಲಿ ನಿತ್ಯೋತ್ಸವ. ಊರು ಮಧ್ಯವೇ ಒಂದು ಗುಡ್ಡವಿದೆ. ಆ ಗುಡ್ಡದ ಮೇಲೂ ದೇವಸ್ಥಾನ. ನಾನೂ ಗೋಸಾವಿಯವರೂ ಆ ಗುಡ್ಡವನ್ನೇರಿದೆವು. ದೂರದಲ್ಲಿ ಗಂಗಾ ನದಿಗೆ ಅಡ್ಡ ಹಾಕಿರುವ ಆಣೆಕಟ್ಟು—ಅದರ ಮುಂದಿನ ಗಂಗಾ ನದಿಯ ವಿಶಾಲವಾದ ಪಾತ್ರ ಕಾಣುತ್ತದೆ. ಹಿಮಾಲಯದ ಕಣಿವೆಗಳಿಂದ ಹೊರಬಿದ್ದ ೪ಂ ಮೈಲಿಗಳು ಮಾತ್ರ ಆಗಿದ್ದರೂ ಒಂದು ಮೈಲಿ ಅಗಲವಾದ ಪಾತ್ರವಿದೆ. ಹರಿದ್ವಾರ ನಗರದ ಎಲ್ಲ ಭಾಗಗಳು,

ಗಂಗಾನದಿಯ ಕಾಲುವೆಗಳು, ಕಾಲುವೆಗಳ ಮೇಲಿನ ದೀಪಗಳ ಸಾಲು —ಎಲ್ಲವನ್ನೂ ವಿಹಂಗಮ ದೃಷ್ಟಿಯಿಂದ ನೋಡಬಹುದು. ನೆತ್ತಿಯ ವರೆಗೆ ಹತ್ತಿದರೂ ಬೆಟ್ಟದ ಮಣ್ಣನ್ನು ಕೈಗೆ ತೆಗೆದುಕೊಂಡರೆ ನದಿಯ ಹೆಕ್ಕಲು ಮಣ್ಣಿನಂತೆ ಪುಡಿಪುಡಿಯಾಗುತ್ತದೆ. ಪ್ರಾಯಶಃ ಯಾವುದೋ ಕಾಲದಲ್ಲಿ ನದಿಯ ಪಾತ್ರವಾಗಿರಬೇಕು. ನೀರು ಕೊರೆದು ಕೊರೆದು ಬೆಟ್ಟವಾಗಿ ಉಳಿದಿರಬೇಕು. ಹಿಮಾಲಯ ಪರ್ವತವೆಲ್ಲ ಹೀಗೆಯೇ ಹಿಂದೆ ಸಮುದ್ರದ ತಳವಾಗಿತ್ತೆಂದು ಭೂಗರ್ಭ ಶೋಧಕರ ಮತ. ಬೆಟ್ಟವನ್ನಿಳಿದು ಬಂದು ಊಟ ಮಾಡಿ, ಸ್ಟೇಷನ್ ಸೇರಿದಾಗ ೯ ಗಂಟೆ. ಒಂದು ಗಂಟೆ ಕಾಯಬೇಕಾಗಿತ್ತು.

ಕಾಯುವ ಕೊಠಡಿಯಲ್ಲಿ ತೆಹರಿ ಘಡ್ವಾಲಿನ ಪೋಲೀಸ್ ಶಾಖಾಧಿಕಾರಿ ಅವತಾರಸಿಂಗರ ಪರಿಚಯವಾಯಿತು. ಮೈಸೂರಿನಿಂದ ಬಂದಿದ್ದೇನೆಂದು ಕೇಳಿದೊಡನೆ ದಿವಂಗತ ನಾಲುಮಡಿ ಕೃಷ್ಣರಾಜ ಒಡೆಯರವರು ಹಿಮಾಲಯ ಯಾತ್ರೆ ಬಂದಾಗ್ಗ ತಾವು ಅವರ ಪರಿವಾರ ದೊಡನೆ ಹೋಗಿದ್ದುದಾಗಿಯೂ, ತಮ್ಮ ಸೇವೆಯನ್ನು ಶ್ರೀ ಕೃಷ್ಣ ರಾಜ ಒಡೆಯರವರು ಬಹಳವಾಗಿ ಮೆಚ್ಚಿ, ತಮ್ಮನ್ನು ಮೈಸೂರಿನ ದಸರಾ ಉತ್ಸವಕ್ಕೆ ಆಹ್ವಾನಿಸಿದ್ದುದಾಗಿಯೂ—ಆ ಉತ್ಸವದ ಸೊಬಗು, ಮೈಸೂರಿನ ಆತಿಥ್ಯ, ಅಲ್ಲಿನ ಸುಂದರ ಸ್ಥಳಗಳು, ಜನರ ಆದರ ಇವುಗಳ ನೆನಪನ್ನು ಎಂದಿಗೂ ಮರೆಯುವಂತೆ ಇಲ್ಲವೆಂದೂ ಹೇಳಿದರು. ಹಿಮಾಲಯ ಯಾತ್ರೆಯಲ್ಲಿ ಶ್ರೀ ಕೃಷ್ಣರಾಜ ಒಡೆಯರು ತಮಗಿಂತಲೂ ಹೆಚ್ಚು ಕಷ್ಟಸಹಿಷ್ಣುಗಳಾಗಿ ಮತ್ತು ಯುವಕರಿಗೂ ಅಸಾಧ್ಯವಾದ ಚಟುವಟಿಕೆಯಿಂದ ಯಾತ್ರೆ ಮಾಡಿದರೆಂದೂ, ತಾವು ಮೈಸೂರಲ್ಲಿದ್ದಾಗ ಶ್ರೀ ಕೃಷ್ಣರಾಜ ಒಡೆಯರನ್ನು ನೋಡಲು ಹೋದಾಗ "ನೀವು ಈ ದಿನ ಏನೇನು ನೋಡಿದಿರಿ? ನಿಮ್ಮ ಮನಸ್ಸಿನ ಮೇಲೆ ಆದ ಪರಿಣಾಮ ಏನು? ನಿಮ್ಮ ಸಲಹೆಗಳೇನು?" ಎಂದು ಕೇಳಿದರು. "ನಾನು ಎಷ್ಟೋ ಕಡೆ ತಿರುಗಿ ಬಂದೆ. ಎಲ್ಲವನ್ನೂ ಜ್ಞಾಪಕದಲ್ಲಿಟ್ಟುಕೊಳ್ಳುವುದು ಹೇಗೆ" ಎಂದು ಹೇಳಿದೆ. ಆಗ ಶ್ರೀಮನ್ಮಹಾರಾಜರು "ನಾವು

ಹೋದಾಗ ಅಧಿಕಾರಿಗಳು ಎಲ್ಲವನ್ನೂ ಸಿದ್ಧಮಾಡಿಕೊಂಡು ತಯಾರಾಗಿರುತ್ತಾರೆ. ನಮ್ಮ ಕಣ್ಣಿಗೆ ಯಾವ ನ್ಯೂನತೆಯೂ ಬೀಳುವುದಿಲ್ಲ. ಮೂರನೆಯವರಾದ ನೀವುಗಳು ನ್ಯೂನತೆಗಳೇನಿವೆ ಎಂಬುದನ್ನು ನನಗೆ ತಿಳಿಸಬೇಕು. ಅದನ್ನು ಸರಿಪಡಿಸಲಿಕ್ಕೆ ಸಹಾಯವಾಗುತ್ತದೆ. ನಾಳೆಯಿಂದ ನೀವು ಪ್ರವಾಸದ ಟಿಪ್ಪಣಿಯನ್ನಿಟ್ಟು ನನಗೆ ವರದಿಮಾಡಬೇಕು" ಎಂದರು. ಮೂರನೆಯ ದಿನದಿಂದ ನಾನು ಅದೇ ರೀತಿ ಮಾಡಿದೆ. ಆ ಅಭ್ಯಾಸ ಈಗಲೂ ಇಟ್ಟಿದ್ದೇನೆ" ಎಂದರು. ಮೈಸೂರಿನ ರಾಜಕೀಯ, ತೆಹರಿ ಘಡ್ವಾಲಿನ ರಾಜಕೀಯ, ಸಂಸ್ಥಾನಗಳ ಭವಿಷ್ಯ ಎಲ್ಲವನ್ನೂ ಚರ್ಚಿಸಿದೆವು. ಮೈಸೂರಿನ ಪ್ರಜೆಗಳ ರಾಜಕೀಯ ಅನುಭವ ಮತ್ತು ಶಿಕ್ಷಣಕ್ಕೂ ಘಡ್ವಾಲಿನ ಜನರ ಪರಿಸ್ಥಿತಿಗೂ ಅಜಗಜಾಂತರವೆಂದೂ, ಆದರೆ ಈಗ ಅಲ್ಲಿಯೂ ಪ್ರಜಾಮಂಡಲಿಯವರು ಚಳುವಳಿ ಎಬ್ಬಿಸಿ ಜವಾಬ್ದಾರಿ ಸರಕಾರ ಬೇಡುತ್ತಿರುವುದಾಗಿಯೂ, ೩೦೦ ಜನ ಮಾತ್ರ ಪೋಲೀಸರು ಇರುವುದಾಗಿಯೂ, ರಾಜರಲ್ಲಿ ಇನ್ನೂ ಪಾಳೆಯಗಾರಿಕೆಯ ಮನೋಭಾವವೇ ಇರುವುದಾಗಿಯೂ, ಪರಿಸ್ಥಿತಿಯು ನಿಜವಾಗಿಯೂ ಕಷ್ಟ ಇರುವುದಾಗಿಯೂ ತಿಳಿಸಿದರು. ಅಷ್ಟರಲ್ಲಿ ರೈಲು ಬಂದಿತು. ನಮ್ಮ ಗಾಡಿಯನ್ನು ಹುಡುಕಿ ಗಂಡಸರ ಗಾಡಿಯಲ್ಲಿ ನಾನೂ, ಹೆಂಗಸರ ೧ನೆ ತರಗತಿ ಗಾಡಿಯಲ್ಲಿ ಶ್ರೀಮತಿ ಮುರಿಗೆಮ್ಮ ಮತ್ತು ಅವರ ಮಗಳು ಕುಳಿತೆವು. ಶ್ರೀ ಗೋಸಾವಿಯವರು ಮೂರನೆಯ ತರಗತಿಯ ಗಾಡಿಯಲ್ಲಿ ಕೂತುಕೊಂಡರು.

ರೈಲು ಹೊರಟಿತು. ಹೊರಟಿದ್ದ ಹಾಗೇ ನಾಲ್ಕು ಮಾರು ಹೋಗಿ ನಿಂತಿತು. ನಮ್ಮ ಗಾಡಿಯ ಎದುರಿಗೇನೆ ೪ ಗಜ ದೂರದಲ್ಲಿ ಒಂದು ಹೆಣ! ಒಂದು ಗಜ ದೂರದಲ್ಲಿ ಇನ್ನೊಬ್ಬ ಅಸ್ತವ್ಯಸ್ತ ಗಗ್ಗರ ಧ್ವನಿಯಲ್ಲಿ "ಪಾನೀ, ಪಾನೀ" ಎಂದು ಕೂಗಿಕೊಳ್ಳುತ್ತಿದ್ದ. ಕೂಡಲೇ ಪೋಲೀಸ್ ಅಧಿಕಾರಿ ಬಂದು ವಿಚಾರಿಸಿದಾಗ ತನ್ನ ಹೆಸರು ಮುಹಮ್ಮದ್ ಹುಸೇನ್ ಎಂದೂ, ತನ್ನ ಅಣ್ಣನನ್ನು

ನೋಡಲು ಡೆಹರಡೂ೯ನಿಂದ ಇಲ್ಲಿಗೆ ಬಂದುದಾಗಿಯೂ, ಯಾರೋ ಸಿಕ್ ಸರದಾರ ತನ್ನನ್ನು ಚೂರಿಯಿಂದ ಇರಿದುದಾಗಿಯೂ ತಿಳಿಸಿದನು. ಸರಿ. ರೈಲಿನಲ್ಲಿ ಪ್ರತಿಯೊಂದು ಗಾಡಿಯಲ್ಲೂ ಸಿಕ್ಕರು ಇದ್ದರು. ಪ್ರತಿಯೊಬ್ಬರನ್ನೂ ಕೆಳಗಿಳಿಸಿ ಮುಖ, ಕೈ, ಬಟ್ಟೆ, ಅವರ ಕರಪಾ೯ ಪರೀಕ್ಷೆ ಮಾಡಲಾಯಿತು. ಯಾರೂ ಸಿಕ್ಕಲಿಲ್ಲ. ಒಬ್ಬ ಸರ್ದಾರ್ ಮಾತ್ರ "ಅವರು ನಮ್ಮ ಜನರನ್ನು ಒಬ್ಬೊಬ್ಬರು ನೂರು ಗಟ್ಟಲೆ ಕೊಂದಿದ್ದಾರೆ. ಒಬ್ಬರು ಸತ್ತರೇನು" ಎಂದನಂತೆ! ಆತನನ್ನು ಕೆಳಗೆ ಇಳಿಸಿ ಕರೆದುಕೊಂಡು ಹೋದರು. ನಮಗೆ ದಿಗಿಲಾಯಿತು. ನನ್ನ ಗಾಡಿಯಲ್ಲಿದ್ದ ಮಿಲಿಟರಿ ಅಧಿಕಾರಿ "ಹೆಂಗಸರ ಗಾಡಿಯಲ್ಲಿ ನಿಮ್ಮವರೊಬ್ಬರೇ ಇದ್ದಾರೆ. ಒಬ್ಬರೇ ಪ್ರಯಾಣ ಮಾಡುವುದು ಅಪಾಯಕರ" ಎಂದ. ನನಗೂ ದಿಗಿಲಾಯಿತು. ನಮ್ಮ ಗಾಡಿ ಎರಡೇ ಸೀಟಿನ 'ಕೂಪೆ' ಆದ್ದರಿಂದ ಸ್ಥಳವಿರಲಿಲ್ಲ. ಅಷ್ಟು ಹೊತ್ತಿಗೆ ಮುಹಮ್ಮದ್ ಹುಸೇನನ ಪ್ರಾಣವು ಹೋಗಿತ್ತು. ರಕ್ತದ ಕೋಡಿಯನ್ನು ಬಳಸಿಕೊಂಡು ಮುರಿಗೆಮ್ಮನವರ ಗಾಡಿಗೆ ಹೋಗಿ, ಕಿಟಕಿ ಬಾಗಿಲುಗಳನ್ನೆಲ್ಲ ಮುಚ್ಚಿಸಿ, ಬೆಳಗಿನವರೆಗೆ ಯಾರು ಬಂದರೂ ಬಾಗಿಲು ತೆಗೆಯ ಬೇಡಿ ಎಂದು ಹೇಳಿ ಬಂದು ಮಲಗಿದೆ. ರಾತ್ರಿ ನಿದ್ರೆಯೇ ಬರಲಿಲ್ಲ. ಬೆಳಿಗ್ಗೆ ದೆಹಲಿಗೆ ಬಂದಾಗ ೯ ಗಂಟೆ. ನಾಳೆ ರಾತ್ರಿ ಇಲ್ಲಿಂದ ಹೊರಡುತ್ತೇನೆ.

೧೪-೧೧-೪೭

ಆಶೀರ್ವಾದಗಳು. ನೀರು ತುಂಬುವ ಹಬ್ಬದ ದಿನ ರಾತ್ರಿಯೇ ಬೆಂಗಳೂರಿನಿಂದ ಹೊರಟೆ. ಹಬ್ಬ ಭೀಮಾಚಾರ್ಯರ ಮನೆಯಲ್ಲಿಯೇ ಆಯಿತು. ರಾಮಣ್ಣನೂ ಊಟಕ್ಕೆ ಬಂದಿದ್ದ. ನರಕ ಚತುರ್ದಶಿ ರೈಲಿನಲ್ಲಿ! ಬೊಂಬಾಯಿಯಲ್ಲಿ ಶ್ರೀಪತಿ ಗೋಪಾಲಾಚಾರ್ಯರ ಬೀಗರು ಶ್ರೀನಿವಾಸಾಚಾರ್ಯರ ಮನೆಯಲ್ಲಿ ಮಾತುಂಗಾದಲ್ಲಿ ಉಳಿದೆ. ಸುಖವಾದ ಹಬ್ಬದೂಟ! ಹೋಳಿಗೆ, ಬೋಂಡ, ಚಿತ್ರಾನ್ನ, ಸೀಮೆ ಅಕ್ಕಿ ಪಾಯಸ. ಬೊಂಬಾಯಿ ಸೇರಿದಾಗ ೧೧ ಗಂಟೆ. ನಾನು

ದೆಹಲಿಗೆ ಹೊರಡಬೇಕೆಂದಿದ್ದ ಪೇಷಾವರ್ ಎಕ್ಸಪ್ರೆಸ್ ಈಗ ಝಾನ್ಸಿವರೆಗೆ ಮಾತ್ರ ಹೋಗುತ್ತದೆ. ಆದ್ದರಿಂದ ವಿಕ್ಟೋರಿಯಾ ಟರ್ಮಿನಸ್‌ನಿಂದ ಬಿ. ಬಿ. ಸಿ. ಐ. ಸೆಂಟ್ರಲ್ ಸ್ಟೇಷನ್‌ಗೆ ಬಂದು ಫ್ರಾಂಟಿಯರ್ ಮೇಲ್‌ನಲ್ಲಿ ಸೀಟಿಗೆ ಪ್ರಯತ್ನ ಮಾಡಿದೆ. ಪುಣ್ಯಕ್ಕೆ ಯಾರೋ ಒಬ್ಬ ಪುಣ್ಯಾತ್ಮ ಸೀಟ್ ರಿಸರ್ವ್ ಮಾಡಿದ್ದವನು ಹೊರಡಲಿಲ್ಲ. ಅದು ನನಗೆ ಸಿಕ್ಕಿತು. ರಾತ್ರಿ ೯-೧೫ಕ್ಕೆ ಹೊರಡುವ ಬದಲು ಸಂಜೆ ೬-೫ಕ್ಕೇನೆ ಹೊರಡಬೇಕಾಯಿತು; ಮತ್ತು ಸಾಲದ್ದಕ್ಕೆ ಮಾತುಂಗಾದಲ್ಲಿ ಎರಡು ಕಡೆ ನಾನು ಭಾಷಣ ಮಾಡಬೇಕೆಂದು ಸಭೆ ಏರ್ಪಡಿಸಿದ್ದರು. ೪-೩೦ಗೆ ಮತ್ತು ೫-೩೦ಗೆ ಒಂದು. ಮಾತುಂಗಾ ದಲ್ಲಿ ಆಚಾರ್ಯರ ಮನೆಗೆ ಬಂದಾಗ ೧-೩೦ ಗಂಟೆ. ಅವಸರದಲ್ಲಿ ಸ್ನಾನಮಾಡಿ, ಊಟಮಾಡಿ ಸ್ವಲ್ಪ ವಿಶ್ರಾಂತಿ ಮುಗಿಸುವ ಹೊತ್ತಿಗೆ ೪ ಗಂಟೆ. ಎರಡು ಕಡೆಯೂ ಆಯಿತು ಎಂಬಂತೆ ಭಾಷಣದ ಶಾಸ್ತ್ರ ಮಾಡಿ ರೈಲಿಗೆ ಓಡಿದೆ. ರೈಲು ಸಿಗುವುದೂ ಕಷ್ಟವಿತ್ತು. ದೀಪಾವಳಿ ಹಬ್ಬವಾದ್ದರಿಂದ ಟ್ಯಾಕ್ಸಿಗಳು ದೊರೆಯಲಿಲ್ಲ. ಮಾತುಂಗದಿಂದ ಸೆಂಟ್ರಲ್ ಸ್ಟೇಷನ್ ೧೦ ಮೈಲಿ. ಕೊನೆಗೆ ಒಬ್ಬ ಸಿಕ್ ಡ್ರೈವರ್ ೧೦ ರೂಪಾಯಿ ತೆಗೆದುಕೊಂಡ—ರೈಲು ಸಿಕ್ಕಿತು. ಉಪವಾಸ ಹೊರಡು ತ್ತಾನೆ ಎಂತ ಎಂಟು ಉಂಡೆ, ಓಂಪುಡಿ ಬೇರೆ ಶ್ರೀ ಶ್ರೀನಿವಾಸಾಚಾರ್ಯರ ಹೆಂಡತಿ ಕೊಟ್ಟಿದ್ದರು. ದೆಹಲಿಗೆ ಈ ರೈಲಿನಲ್ಲಿ ಹೊರಟಿದ್ದರಿಂದ ೧೨ ಗಂಟೆಗೆ ಮುಂಚೆಯೇ ಬಂದೆ. ಈಗ ನನಗೆ ೧೬ನೆ ರೂಮು ಕೊಟ್ಟಿದ್ದಾರೆ (ದೊಡ್ಡದು). ಫ್ರಾಂಟಿಯರ್ ಮೇಲ್ ಆಗ್ರಾದ ಮೇಲೆ ಹೋಗುತ್ತೆ. ಆದ್ದರಿಂದ ಕೃಷ್ಣಮೂರ್ತಿಗಳ ಮಕ್ಕಳನ್ನು ನೋಡಲು ಆಗಲಿಲ್ಲ. ಅವರ ವಿಳಾಸ ಊರಿನಲ್ಲೇ ಮರೆತು ಬಂದೆ. ಆದ್ದರಿಂದ ಈ ಕಾಗದ ತಲ್ಪಿದ ದಿನವೆ ಅವರ ಆಗ್ರಾ ವಿಳಾಸ ವಿಚಾರಿಸಿ ಬರಿ. ಇಲ್ಲಿಂದ ರೈಲ್ವೆ ಪಾರ್ಸಲ್ ಮಾಡಿ ಸಾಮಾನು ವಗೈರೆ ಕಳುಹಿಸುತ್ತೇನೆ. ಕೃಷ್ಣಮೂರ್ತಿಗಳೂ ಅವರ ಮಗನಿಗೆ ಒಂದು ಪತ್ರ ಬರೆಯಲಿ. ಇಲ್ಲಿ ಚಳಿ ಬಹಳ ಎಂದು ಹೆದರಿಸಿದ್ದರು. ನಿನ್ನೆ ರಾತ್ರಿಯ ಅನುಭವದಿಂದ

ಅಷ್ಟೇನೂ ಗಾಬರಿಯಾಗಬೇಕಾದ್ದಿಲ್ಲ. ತಡೆಯಬಹುದು ಎಂದು ತೋರುತ್ತದೆ. ಅಸೆಂಬ್ಲಿ ಸದಸ್ಯರು ಬಹಳ ಜನ ಬಂದಿಲ್ಲ. ೫-೬ ಜನರು ಮಾತ್ರ ಬಂದಿದ್ದಾರೆ. ಚಿತ್ರದುರ್ಗಕ್ಕೆ ನೀನು ಹೋದರೆ ತಿಮ್ಮುಗೆ ತಪ್ಪಿಲು ಕಾಗದ ಬರೆಯಲು ಹೇಳು. ಅವನ ವ್ಯವಹಾರ ವನ್ನೆಲ್ಲ ಹೇಗೆ ತೀರ್ಮಾನ ಮಾಡಿಕೊಂಡ ಎಂಬುದಕ್ಕೆ ಬರೆಯಿರಿ. ತೀರ್ಥರೂಪರವರಿಗೂ ಮಾತೃಶ್ರೀಯವರಿಗೂ, ಎಲ್ಲರಿಗೂ ನನ್ನ ನಮಸ್ಕಾರಗಳನ್ನು ತಿಳಿಸು.

ನಾನು ಹೊರಡುವ ಹಿಂದಿನ ದಿನ ಏಕಾದಶಿ. ಬಸವನಗುಡಿ ಶ್ರೀ ಡಿ. ವಿ. ಗುಂಡಪ್ಪನವರ ಮನೆಗೆ ಹೋಗುವಾಗ ಅಕಸ್ಮಾತ್ ನಮ್ಮ ಕಾರಿಗೆದುರು ಒಂದು ಬಸ್ ಬಂದು ಡಿಕ್ಕಿ ಹೊಡೆಯುವದರಲ್ಲಿತ್ತು. ಕಾರು ಅಲ್ಲಿಗೇ ನಿಲ್ಲಿಸಿದ್ದರಿಂದ ಪಾರಾದೆವು. ಆಗ ನನ್ನ ಗುರುತಿನವ ರೊಬ್ಬರು ಬಂದು ರಾಯರ ಮಠಕ್ಕೆ ಬಂದು ಹೋಗಿ ಎಂದರು. ಹೋಗಿ, ರಾಯರ ದರ್ಶನ ತೆಗೆದುಕೊಂಡು ಫಲ ಮಂತ್ರಾಕ್ಷತೆ ತೆಗೆದುಕೊಂಡೆ. ಈ ಅಕಸ್ಮಾತ ಘಟನೆಯಿಂದ ನನಗೇ ಆಶ್ಚರ್ಯ ವಾಯಿತು! ಗುರುಗಳ ಕೃಪೆ ದೊಡ್ಡದು—ಸದಾ ನಮ್ಮ ಮೇಲಿರಲಿ ಎಂದು ಪ್ರಾರ್ಥಿಸುತ್ತೇನೆ. ಶ್ರೀ ಮಾಸ್ತಿಯವರು ನಿನ್ನನ್ನು, ಯಜಮಾ ರುಗಳ ಆರೋಗ್ಯವನ್ನು ಕೇಳಿದರು. ಚಿ|| ರಾಜು, ಸುಂದ್ರು, ಶಾಂತ ಎಲ್ಲರಿಗೂ ಅನಂತ ಆಶೀರ್ವಾದಗಳು. ರಾಮು ಈಗ ಹುಷಾರಾಗಿ ಇದ್ದಾನೆ. ಈ ಸುದ್ದಿ ತಿಳಿಸು. ಅವನಿಗೆ ಪ್ಯಾಸಾದರೆ ಬಿ. ಎ. ಡಿಗ್ರಿಯೂ ಸಿಕ್ಕುತ್ತೆ. ಮಿನಿಸ್ಟರ್ ಕಂಡು ಮಾತನಾಡಿದೆ. ಮೈಸೂರಿನಿಂದ ಶ್ರೀ ಚಂಗಲರಾಯರೆಡ್ಡಿ, ಚಂದ್ರಶೇಖರಯ್ಯ, ಮಹಮ್ಮದ್ ಷರೀಫ್, ದಿವಾನ್ ಯಾರೂ ಬರುವಂತೆ ಕಾಣುವುದಿಲ್ಲ. ಕಾಂಗ್ರೆಸ್ಸಿಗೆ ನಾನೇ ಒಬ್ಬ. ಗುರುವಾರೆಡ್ಡಿ, ಚನ್ನಯ್ಯ ಬರುವಂತೆ ಕಾಣುತ್ತೆ. ನಿಜಲಿಂಗಪ್ಪ ಇನ್ನೂ ಒಂದು ವಾರ ತಡೆದು ಬರಬಹುದು. ಇಲ್ಲಿ ಈಗ ಗಲಾಟೆ ಏನೂ ಇಲ್ಲ. ಎಲ್ಲ ಶಾಂತವಿದೆ. ನಮ್ಮ ರೈಲಿಗೆ ಮಿಲಿಟರಿ ಕಾವಲು ಇತ್ತು. ಅಸೆಂಬ್ಲಿ ಅಧಿವೇಶನ ಒಂದು ವಾರ ಹೆಚ್ಚಿದೆ. ಡಿಸೆಂಬರ್ ೧೨ರ

ವರೆಗೆ ಇದೆ. ೧೫-೧೬ರ ಹೊತ್ತಿಗೆ ಊರಿಗೆ ಬರಬಹುದು. ಈಗ ಅಲ್ಲಿ ಗಲಾಟೆ ಏನಾದರೂ ಇದೆಯೇ? ಎಲ್ಲ ವಿಷಯಕ್ಕೂ ಕಾಗದ ಬರೆ. ಈ ದಿನ ನಾಲ್ಕು ಗಂಟೆಗೆ ನಮ್ಮ ಕಾಂಗ್ರೆಸ್ ಪಾರ್ಟಿ ಮೀಟಿಂಗ್. ಇವತ್ತು ಪಂಡಿತ್ ಜವಹರಲಾಲ್‌ರವರಿಗೆ ೫೮ನೆ ವರ್ಷ—ಹುಟ್ಟಿದ ಹಬ್ಬ.

೨೫-೧೧-೪೭

ನಾನು ಬಂದು ೮-೯ ದಿನಗಳಾದವು. ಈ ಮಧ್ಯೆ ಯಾರು ಕಂಡರೂ ಮೈಸೂರಿನ ಕಾಂಗ್ರೆಸ್‌ನವರನ್ನೂ, ಮೈಸೂರು ಸತ್ಯಾಗ್ರಹಿಗಳನ್ನೂ ಅಭಿನಂದಿಸುವವರೆ. ಶ್ರೀ ಅನಂತಶಯನಂ ಅಯಂಗಾರ್, ಡಾಕ್ಟರ್ ಪಟ್ಟಾಭಿ ಸೀತಾರಾಮಯ್ಯ, ಹೃದಯನಾಥ ಕುಂಜರು ಮತ್ತು ಇನ್ನೂ ಅನೇಕ ಸದಸ್ಯರು. ಸಂಸ್ಥಾನಗಳ ಸದಸ್ಯರಂತೂ ಬಂದು ಬಂದು ಸತ್ಯಾಗ್ರಹದ ವಿಷಯವನ್ನೂ, ಚೆಂಗಲರಾಯರೆಡ್ಡಿಯವರ ವಿಳಾಸವನ್ನೂ ಕೇಳುತ್ತಿದ್ದಾರೆ. ನಿನ್ನೆಯ ದಿನ ಓರ್ವ ಸಂಸ್ಥಾನದ ಸದಸ್ಯರೂ ಮತ್ತು ಅಲ್ಲಿನ ಕಾಂಗ್ರೆಸ್ ನಾಯಕರೂ ಬಂದು "ಸತ್ಯಾಗ್ರಹ ಹೇಗೆ ನಡೆಸಿದಿರಿ? ಏನೇನು ಕಾರ್ಯಕ್ರಮ ಹಾಕಿದ್ದಿರಿ? ಆ ಕಾರ್ಯಕ್ರಮವನ್ನು ಕಾರ್ಯಗತಮಾಡಲು ಯಾವ ಯಾವ ಸಂಸ್ಥೆಗಳ ಮುಖಾಂತರ ಕೆಲಸ ಮಾಡಿದಿರಿ? ಪ್ರಚಾರ ಯಾವ ರೀತಿ ಮಾಡಿದಿರಿ? ಕೂಲಿಗಾರರು, ರೈತರು, ವಿದ್ಯಾರ್ಥಿಗಳು, ಪೋಲೀಸ್, ಮಿಲಿಟರಿಯವರು ಸರ್ಕಾರಿ ನೌಕರರು ನಿಮಗೆ ಯಾವ ರೀತಿ ಸಹಾಯ ಮಾಡಿದರು? ಕೇವಲ ೪೨ ದಿನಗಳಲ್ಲಿ ನೀವು ಜಯಶೀಲರಾಗುವಷ್ಟು ಏನು ಉಗ್ರ ಕಾರ್ಯಕ್ರಮ ಕೈಗೊಂಡಿರಿ?" ಎಂದು ಪ್ರಶ್ನೆಗಳ ಸುರಿಮಳೆಯನ್ನೇ ಹಾಕಿದರು. ಮೊನ್ನೆಯ ದಿನ ಪೂರ್ವ ಭಾರತ ಸಂಸ್ಥಾನಗಳ ಪ್ರತಿನಿಧಿ ಯುಧಿಷ್ಠಿರ ಮಿತ್ರ, ತ್ರಿಪಾಠಿ ಮತ್ತು ಅವರ ಸ್ನೇಹಿತರು ಬಂದಿದ್ದರು. ಅದಕ್ಕೂ ಮುಂಚೆ ಬರೋಡ ಸಂಸ್ಥಾನದ ಪ್ರಜಾಮಂಡಲದ ಅಧ್ಯಕ್ಷರಾದ ಚುನಿಲಾಲ್ ಪಿ. ಷಾ ಅವರು ಬಂದಿದ್ದರು. ಎಲ್ಲರದೂ ಅದೇ ಪ್ರಶ್ನೆಗಳ ಸುರಿಮಳೆ! ಚುನಿಲಾಲ್ ಪಿ. ಷಾರವರಿಗೆ ಹರಿಹರದಿಂದ ನನಗೆ ದಾರಿಯಲ್ಲೆ ದಸ್ತಗಿರಿಯಾದದ್ದು, ಹರಿಹರದಲ್ಲಿ ಭಾಷಣ,

ಹೆಂಡದ ಅಂಗಡಿ ಪಿಕೆಟಿಂಗ್, ಮೈಸೂರು ಕಾಂಗ್ರೆಸ್ ವರ್ಕಿಂಗ್ ಕಮಿಟಿ ಸದಸ್ಯರು " ಮೈಸೂರು ಚಲೋ " ಘೋಷಣೆಮಾಡಿ ಅರಮನೆಗೆ ಸತ್ಯಾಗ್ರಹಕ್ಕಾಗಿ ಹೊರಟಿದ್ದು, ಸರ್ಕಾರಿ ಕಟ್ಟಡಗಳ ಮೇಲೆ ಧ್ವಜ ಹಾರಿಸಲು ಹೂಡಿದ ಸತ್ಯಾಗ್ರಹ, ಸಂಸ್ಥಾನದ ಮೂಲೆ ಮೂಲೆಗಳಿಂದ ರೈತರ ತಂಡಗಳು "ಮೈಸೂರು ಚಲೋ" ಸತ್ಯಾಗ್ರಹ ಹೊರಟಿದ್ದು, ವಿದ್ಯಾರ್ಥಿಗಳ ಮುಷ್ಕರ ಮತ್ತು ಸತ್ಯಾಗ್ರಹದಲ್ಲಿ ಅವರ ಪಾತ್ರ, ರೈಲ್ವೆ ಮುಷ್ಕರ, ಅರಣ್ಯ ಸತ್ಯಾಗ್ರಹ, ನಮ್ಮ ಕ್ರಾಂತಿ ಬುಲೆಟಿನ್‌ಗಳು, ಬೆಂಗಳೂರಿನಲ್ಲಿ ಪೋಲಿಸಿನವರ ಮುಷ್ಕರ, ಗುಂಡಿನೇಟುಗಳು, ಲಾಠಿ ಪ್ರಹಾರಗಳು, ರಾಜಘೋಷಣೆ ಮೇಲೆ ರಾಜಘೋಷಣೆ ಹೊರಡಿಸಿ ಸತ್ಯಾಗ್ರಹವನ್ನು ಮುರಿಯಲು ಶ್ರೀ ರಾಮಸ್ವಾಮಿ ಮೊದಲಿಯಾರರು ಮಾಡಿದ ಪ್ರಯತ್ನ—ಸುತ್ತಲೂ ಕರ್ನಾಟಕ, ತಮಿಳುನಾಡು ಮತ್ತು ಆಂಧ್ರಪ್ರಾಂತಗಳಿಂದ ಒದಗಿದ ಸಹಾಯ, ನಾನು ಕರ್ಫ್ಯೂ ಮುರಿದು ಜೈಲಿಗೆ ಹೋದದ್ದು ಎಲ್ಲವನ್ನೂ ತಿಳಿಸಿದೆ. ಸುಮಾರು ಎರಡು ಗಂಟೆ ನನ್ನೊಂದಿಗೆ ಮಾತನಾಡಿದರು. ಅರಮನೆ ಮೇಲೆ ಧ್ವಜ ಹಾರಿಸಿದ್ದು, ಜೈಲಿನಲ್ಲಿ ಬಾಂಬು ಸಿಡಿದದ್ದು, ಕೊನೆಕೊನೆಗೆ ನಾಯಕರಿಲ್ಲದ ಜನ ರೊಚ್ಚಿಗೆದ್ದು ಸ್ವಲ್ಪ ಹಿಂಸಾಕೃತ್ಯದಲ್ಲಿ ತೊಡಗಿದ್ದು, ದಿವಾನರೊಂದಿಗೆ ಸಂಧಾನ, ಕಾರ್ಯ ಸಮಿತಿಯವರು ಹೇಳಿದ ಕರಡಿಗೆ ಒಪ್ಪಿದ ಬಗೆ, ಮೈಸೂರು ಯಾತ್ರೆ, ಮಧ್ಯವರ್ತಿ ಜವಾಬ್ದಾರಿ ಸರ್ಕಾರ ಸ್ಥಾಪನೆ, ದಿವಾನರ ಅಧಿಕಾರ ಎಲ್ಲವನ್ನೂ ವಿಶದವಾಗಿ ತಿಳಿಸಿದೆ. ನನ್ನಲ್ಲಿದ್ದ ಒಪ್ಪಂದದ ಪ್ರಕಾರ ಹೊರಡಿಸಿದ ರಾಜಘೋಷಣೆಯನ್ನೂ ಕೆಲವು ಕಾಗದಪತ್ರಗಳನ್ನೂ ತೆಗೆದುಕೊಂಡು ಹೋದರು. ಈ ದಿನ ಷಾರವರು ಬಂದು ನನ್ನ ಸಂಭಾಷಣೆ ಎಲ್ಲವನ್ನೂ ಗುಜರಾತಿ ಪತ್ರಿಕೆಯೊಂದರಲ್ಲಿ ಪ್ರಕಟಿಸಿದರೆಂದೂ, ಬರೋಡದಲ್ಲಿ ಅದರಿಂದ ಪ್ರಚಂಡ ಪರಿಣಾಮವಾಗಿದೆ ಎಂದೂ, ಬರೋಡ ಸರಕಾರ ಈಗ ತಮ್ಮೊಡನೆ ಏನಾದರೂ ಮಾಡಿ ಒಪ್ಪಂದ ಮಾಡಿಕೊಳ್ಳಬೇಕೆಂದು ಇದೆ ಎಂದೂ ತಿಳಿಸಿದರು. ಆ ಪತ್ರಿಕೆಯನ್ನು ತಂದು ಓದಿ, ಇಂಗ್ಲಿಷ್‌ನಲ್ಲಿ ಅನುವಾದ ಮಾಡಿದರು.

ಪುನಃ ಈಗ ಮೈಸೂರು ಎಲ್ಲರ ಬಾಯಲ್ಲೂ ಇದೆ. ಮೈಸೂರಿನಲ್ಲಿ ಮಂತ್ರಿಗಳಾಗಿದ್ದ ಶ್ರೀ ಎಂ. ಎ. ಶ್ರೀನಿವಾಸನ್ ಸಿಕ್ಕಿದ್ದರು. ಇಲ್ಲಿ ಇಂಡಿಯಾ ಸೆಕ್ರೆಟೇರಿಯಟ್‌ನಲ್ಲಿ ಅನೇಕರು ಮೈಸೂರಿನವರಿದ್ದಾರೆ. ಎಲ್ಲರೂ ನಮ್ಮನ್ನು ಅಭಿನಂದಿಸುವವರೆ!

ಇಲ್ಲಿಂದ ಸೆಪ್ಟೆಂಬರ್‌ನಲ್ಲಿ ಹೊರಟಾಗ ಎಲ್ಲರೂ ಅನುಮಾನ ಪಡುತ್ತಿದ್ದರು. ಸರದಾರರು "ಶ್ರೀ ದಾಸಪ್ಪನವರು ನಿಮಗೆ ಸ್ವಾತಂತ್ರ್ಯ ಬರುವುದಕ್ಕಿಂತ ಮುಂಚೆ ಜವಾಬ್ದಾರಿ ಸರ್ಕಾರ ಪಡೆಯುತ್ತೇವೆ ಎಂದು ಹೇಳಿದ್ದರು—ಈಗ ನೀವು ಎಲ್ಲಿದ್ದೀರಿ" ಎಂದು ಹೇಳಿದ್ದರು. ಮಹಾತ್ಮರು "I had very hopes of Mysore and its young Ruler. But I am sadly disappointed" ಎಂದಿದ್ದರು. ಪಂಡಿತರು "ಮೈಸೂರು ಥಂಡ್ ಹೋಗಯಾ ಹೈ" ಎಂದಿದ್ದರು. ಇಲ್ಲಿನ ಮೈಸೂರು ಸ್ನೇಹಿತರು "ಏನಪ್ಪ ನಿಮ್ಮಲ್ಲಿ ಒಗ್ಗಟ್ಟಿದೆಯೆ? ಶಕ್ತಿ ಇದೆಯೆ? ಸತ್ಯಾಗ್ರಹ ಎಲ್ಲಾದರೂ "ಫಿಜಲ್ ಔಟ್" (ಥಣ್ಣಗೆ) ಆದರೆ ಏನು ಗತಿ. ರಾಮಸ್ವಾಮಿ ಮೊದಲಿಯಾರರು ಬಹಳ ಬುದ್ಧಿವಂತರು. ನಿಮ್ಮ ನಿಮ್ಮಲ್ಲೆ ಜಗಳ ಹಚ್ಚಿಸಿ, ಒಡಕು ಹುಟ್ಟಿಸುವುದಕ್ಕೆ ಪ್ರಯತ್ನ ಪಡುತ್ತಾರೆ. ನಮಗೇನೋ ಬಹಳ ಗಾಬರಿ. ಈ ಸಲ ನೀವು ಸೋತರೆ ಮೈಸೂರಿಗೆ ಭವಿಷ್ಯವೇ ಇಲ್ಲ" ಎಂದು ಸಂಶಯ ಪಡುತ್ತಿದ್ದರು. ನಮ್ಮ ಕಾಂಗ್ರೆಸ್ಸೇತರ ಮಿತ್ರರು "ಇದೆಲ್ಲ ಬ್ರಾಹ್ಮಣೇತರ ದಿವಾನರನ್ನು ಓಡಿಸಲು ಬ್ರಾಹ್ಮಣರು ಹೂಡಿರುವ ಪಿತೂರಿ, All right, you have unleashed your forces, we will unleash our forces come what way" ಎಂತ ಹೇಳುತ್ತಿದ್ದರು. ಅವರಿಗೂ ನಿಜಲಿಂಗಪ್ಪನಿಗೂ ಈ ವಿಷಯವಾಗಿ ವ್ಯಾಜ್ಯವೇ ಆಯಿತು. ಈಗ ಎಲ್ಲರೂ ಮೈಸೂರಿಗೆ 'ಶಹಭಾಷ್‌ಗಿರಿ' ಕೊಡುವವರೆ!

ಇವಕ್ಕೆ ಕಾರಣ ಸಂಸ್ಥಾನಗಳ ಪ್ರಜೆಗಳೆಲ್ಲರೂ ಮೈಸೂರು ತಮಗೆ ಮಾರ್ಗದರ್ಶಕವಾಗುವುದೆಂದೂ, ಮೈಸೂರು ಗೆದ್ದರೆ ತಾವು ಗೆಲ್ಲುವುದು

ಖಂಡಿತವೆಂದೂ ಭಾವಿಸಿದ್ದರು. ಅವರ ಆಸೆಗಳಿಗೆ ಈಗ ರೆಕ್ಕೆ ಬಂದಂತಾಗಿದೆ. ಸಂಸ್ಥಾನಗಳ ಪ್ರಶ್ನೆ ಬಹು ದೊಡ್ಡ ಪ್ರಶ್ನೆ. ಇಂಡಿಯಾ ದೇಶದಲ್ಲಿ ೬೦೧ ಸಂಸ್ಥಾನಗಳಿವೆ. ಮೈಸೂರು, ತಿರುವಾಂಕೂರು, ಹೈದರಾಬಾದಿನಂತೆ ಇರುವ ದೊಡ್ಡ ಸಂಸ್ಥಾನಗಳು ೧೮-೧೨ ಮಾತ್ರ. ಉಳಿದವುಗಳೆಲ್ಲ ಸಣ್ಣ ಸಣ್ಣ ಸಂಸ್ಥಾನಗಳು. ಬ್ರಿಟಿಷರು ಇಂಡಿಯ ಬಿಟ್ಟು ಹೊರಡುವ ಮುಂಚೆ ಭಾರತೀಯರಿಗೆ ಅಧಿಕಾರ ವಹಿಸುವುದರಲ್ಲಿ ಒಂದು ಸೌಜನ್ಯತೆಯನ್ನಾಗಲಿ, ಔದಾರ್ಯ ವನ್ನಾಗಲಿ ತೋರಲಿಲ್ಲ. ಈ ಸಂಸ್ಥಾನಗಳೆಲ್ಲ ಬ್ರಿಟಿಷರ ಕುತಂತ್ರ ರಾಜನೀತಿಯ ಶಿಶುಗಳು. ಅವರು ಇಲ್ಲಿ ಇರುವವರೆಗೆ ಈ ರಾಜರು ಗಳೆಲ್ಲ ಇಂಡಿಯ ಸರಕಾರದ ರಾಜಕೀಯ ಶಾಖೆಯ ಕೈಗೊಂಬೆ ಗಳಾಗಿದ್ದರು. ಭಾರತದ ರಾಷ್ಟ್ರೀಯ ಭಾವನೆಗೆ ಅಡ್ಡಲಾಗಿ ರಾಜರುಗಳು ಬಟ್ಲರ್ ಕಮಿಷನ್ ಮುಂದೆ ಸಾರ್ವಭೌಮತ್ವ (Sovereignty) ಪ್ರಶ್ನೆಯನ್ನೆತ್ತಿದರು. ಬ್ರಿಟಿಷರು ರಾಜರುಗಳ ಸಾರ್ವಭೌಮತ್ವವನ್ನು ಒಪ್ಪದಿದ್ದರೂ ವೈಸರಾಯ್ ಮತ್ತು ಗೌರ್ನರ್ ಜನರಲ್ (ಕ್ರೌನ್ ರೆಪ್ರೆಸೆಂಟೆಟಿವ್) ಬ್ರಿಟಿಷ್ ದೊರೆಯ ಪ್ರತಿನಿಧಿ ಯಾದನು. ಬ್ರಿಟಿಷರು ಇಂಡಿಯಾದಿಂದ ಹೊರಡುವಾಗ ತಮ್ಮಲ್ಲಿದ್ದ ಸಾರ್ವಭೌಮತ್ವವನ್ನು ನ್ಯಾಯವಾಗಿ ಭಾವೀ ಭಾರತ ಸರ್ಕಾರಕ್ಕೆ ವಹಿಸುವ ಬದಲು ಅದು ಗತಿಸುತ್ತದೆ (lapses) ಎಂದರು. ೬೦೧ ಜನ ರಾಜರುಗಳಲ್ಲಿ ಅನೇಕರಲ್ಲಿ ಸ್ವತಂತ್ರರಾಗಿ ಬಿಡೋಣ ಎಂಬ ಆಸೆ ಹುಟ್ಟಿದೆ. ಇಂದೂರು, ಭೋಪಾಲ್, ಹೈದರಾಬಾದ್, ಜುನಾಗಡ, ತಿರುವಾಂಕೂರು ಇವುಗಳು ಅದರಲ್ಲಿ ಮುಖ್ಯವಾದುವು. ಇನ್ನೂ ಕೆಲವು ಯೂನಿಯನ್ ಸರಕಾರವನ್ನು ಸೇರಿದ್ದರೂ ಒಮ್ಮನಸ್ಸಿನಿಂದ ಸೇರಿಲ್ಲ. ಅದಕ್ಕೇನೆ ಗಾಂಧೀಜಿ " They have joined the Union with a mental reservation and not with an open heart " ಎಂದದ್ದು. ಪ್ರಜೆಗಳಿಗೆ ಜವಾಬ್ದಾರಿ ಸರಕಾರವನ್ನು ಕೊಡಲು ರಾಜರುಗಳಿಗೆ ಇಷ್ಟವಿಲ್ಲ. ಮುಂಬೈಯಿಂದ

ಹೊರಟರೆ ಜಿ. ಐ. ಪಿ. ರೈಲು ಮೂಲಕ ಬರಲಿ, ಬಿ. ಬಿ. ಸಿ. ಐ. ಮೂಲಕ ದೆಹಲಿಗೆ ಬರಲಿ, ದಾರಿ ಉದ್ದಕ್ಕೂ ಲೆಕ್ಕವಿಲ್ಲದಷ್ಟು ಸಂಸ್ಥಾನಗಳಿವೆ. ಒಂದೊಂದೂ ಸ್ವತಂತ್ರವಾದರೆ ವ್ಯಾಪಾರ, ವಾಣಿಜ್ಯ, ವ್ಯವಹಾರವೇ ನಿಂತುಹೋದೀತು. ಒಂದೊಂದು ಸಂಸ್ಥಾನದಲ್ಲಿ ಒಂದೊಂದು ಸಮಸ್ಯೆ. ಬರೋಡದಲ್ಲಿ ಗುಜರಾತೀ ಜನರು—ಮಹಾರಾಷ್ಟ್ರದ ದೊರೆ, ಹೈದರಾಬಾದಿನಲ್ಲಿ ಹಿಂದೂ ಬಹು ಸಂಖ್ಯಾಕರು—ರಾಜ್ಯಾಡಳಿತವೆಲ್ಲ ಅಲ್ಪಸಂಖ್ಯಾತರಾದ ಮುಸಲ್ಮಾನರು ಮತ್ತು ರಜಾಕರರ ಕೈಯಲ್ಲಿ, ಇಂದೂರಿನಲ್ಲಿ ಹೋಳ್ಕರ್ ಮಹಾರಾಷ್ಟ್ರದ ರಾಜ—ಆಡಳಿತವೆಲ್ಲ ಯೂರೋಪಿಯನ್ನರ ಅಧಿಕಾರಿಗಳ ಕೈಯಲ್ಲಿ. ರಾಜಪುತಾಣದಲ್ಲಿ ಇನ್ನೂ ಮಧ್ಯಯುಗದ ಪಾಳೆಯಗಾರಿಕೆ ಹೋಗಿಲ್ಲ. ಆಡಳಿತವೆಲ್ಲ ಜಾಗೀರ್‌ದಾರರ ಕೈಯಲ್ಲಿದೆ. ಜಮೀನ್ದಾರರ ಕೈಯಲ್ಲಿ ರೈತರೆಲ್ಲ ಜೀತದ ಆಳುಗಳು; ಇನ್ನು ಕೆಲವರು ಕಾಳಸಂತೆ ವ್ಯಾಪಾರದಿಂದ ದುಡ್ಡು ಮಾಡುತ್ತಿದ್ದಾರೆ. ಇಲ್ಲಿ ಒಂದು ಸಂಸ್ಥಾನದ ವಾರ್ಷಿಕ ವರಮಾನ ೯ ಲಕ್ಷ ರೂಪಾಯಿ; ಆದರೆ ಅಲ್ಲಿನ ರಾಜ ಯುದ್ಧಕಾಲದಲ್ಲಿ ೯ ಕೋಟಿ ರೂಪಾಯಿ ಸಂಪಾದಿಸಿದನಂತೆ! ಇವಕ್ಕೆ ಯೂನಿಯನ್ ಇಂಡಿಯದ ಬಂಡವಾಳಗಾರರ ಸಹಾಯ. ಜನರಲ್ಲಿ ಐಕಮತ್ಯವಿಲ್ಲ. ಅನೇಕರು ಅಧಿಕಾರದ ಆಸೆಗಾಗಿ ಪ್ರಜಾಮಂಡಲಗಳನ್ನು ಕಟ್ಟಿದ್ದಾರೆ. ಕೆಲವು ಕಡೆ ಎರಡು ಮೂರು ಪ್ರಜಾಮಂಡಲಗಳು. ಇದಕ್ಕೆ ರಾಜರುಗಳ ಪ್ರೋತ್ಸಾಹ. ಒಬ್ಬರ ಮೇಲೊಬ್ಬರನ್ನು ಎತ್ತಿಗಟ್ಟಿ ಕೊನೆಗೆ ಇಬ್ಬರನ್ನೂ ಸದೆಬಡೆಯುವುದು.

ಈ ಸಲ ನಾನು ಮುಂಬೈಯಿಂದ ಬರುವಾಗ ಸವಾಯಿಮಾಧವಪುರ ಎಂಬಲ್ಲಿ ಜಯಪುರದ ಪ್ರತಿನಿಧಿ ಹೀರಾಲಾಲ್ ಶಾಸ್ತ್ರಿಗಳು ಅದೇ ರೈಲಿನಲ್ಲಿ ನನ್ನ ಗಾಡಿಯಲ್ಲೇ ಪ್ರಯಾಣ ಮಾಡಿದರು. ಒಳ್ಳೆಯ ಆನೆಯಂತಹ ಮನುಷ್ಯ—ಆಜಾನುಬಾಹು. ಅವರೂ " ನೀವೇನೊ ಮೈಸೂರಿನ ಪ್ರಶ್ನೆ ಹೂವಿನ ಹಾರ ಎತ್ತಿದಂತೆ ಬಹು ಸುಲಭವಾಗಿ ಬಿಡಿಸಿದಿರಿ. ನಮಗೆ ಜಹಗೀರುದಾರರುಗಳು ಬಹಳ ತೊಂದರೆ

ಕೊಡುತ್ತಿದ್ದಾರೆ. ಸೈನ್ಯವೆಲ್ಲ ಅವರ ಕೈಲಿ. ಸಂಸ್ಥಾನದ ಮುಕ್ಕಾಲು ಪಾಲು ಭೂಮಿ ಎಲ್ಲ ಅವರ ಕೈಲಿ" ಎಂದರು. ಜೋಧಪುರದ ಜೈನಾರಾಯಣ ವ್ಯಾಸ್ ಇದ್ದಾರೆ. ಅವರೂ ಇದೇ ರಾಗವನ್ನು ಎತ್ತಿದರು.

ಈಗ ಈ ಸಂಸ್ಥಾನಗಳ ಪ್ರಶ್ನೆಯನ್ನು ಬಿಡಿಸುವ ಭಾರ ಸರದಾರರ ಮೇಲೆ ಬಿದ್ದಿದೆ. ಸಣ್ಣ ಸಂಸ್ಥಾನಗಳನ್ನೂ ಇಂಡಿಯಾದೊಳಗೆ ವಿಲೀನ ಮಾಡಿಯೋ ಅಥವ ದೊಡ್ಡ ದೊಡ್ಡ ಒಕ್ಕೂಟಗಳನ್ನಾಗಿ ಮಾಡಿಯೋ ಸಂಸ್ಥಾನಗಳ ಸಮಸ್ಯೆಯನ್ನು ಬಿಡಿಸಬೇಕಾಗಿದೆ. ಭಾರತದ ರಾಜ್ಯಾಂಗದೊಳಗೆ ಅವುಗಳನ್ನು ಹೊಂದಿಸಬೇಕಾಗಿದೆ. ಸರದಾರರ ಭುಜವೂ ವಿಸ್ತಾರವಿದೆ, ಬಲವೂ ಅಪ್ರತಿಹತವಾಗಿದೆ. ಜತೆಗೆ ಜನರೂ ಎಚ್ಚತ್ತಿದ್ದಾರೆ. ಅಂತೂ "ಮೈಸೂರು ಒಪ್ಪಂದ" ಎಂಬುದು ಚರಿತ್ರಾರ್ಹವಾಗಿದೆ.

ಸರದಾರರಿಗೆ ಈಗ ೭೩ ವರ್ಷ ವಯಸ್ಸು. ಆದರೂ ಮೂವತ್ತು ವರುಷದ ತರುಣರಿಗಿಂತ ಹೆಚ್ಚು ಕೆಲಸ ಮಾಡುತ್ತಾರೆ. ಯಾರು ಅವರನ್ನು ನೋಡಬೇಕಾದರೂ ಬೆಳಿಗ್ಗೆ ಅವರು ತಿರುಗಾಡಲು ಹೊರಟಾಗಲೇ ಭೇಟಿ. ೪-೩೦ ಗಂಟೆಗೇ ಎದ್ದು, ೫ ಗಂಟೆಗೆ ಸರಿಯಾಗಿ ಮನೆಯಿಂದ ಹೊರಡುತ್ತಾರೆ. ಅವರ ಮನೆಯ ಬಳಿ ಒಂದು ದೊಡ್ಡ ತೋಟವಿದೆ. ಆ ತೋಟದಲ್ಲಿ ಇವರ ತಿರುಗಾಟ. ಜತೆಯಲ್ಲಿ ಮಗಳು ಮಣಿಬೇನ್. ಸರದಾರರನ್ನಾದರೂ ನೋಡಿ ಕೊಳ್ಳಬಹುದು—ಆದರೆ ಮಣಿಬೇನರನ್ನು ಕಂಡರೆ ಭಯವಾಗುತ್ತೆ. ಕೆಲಸವಾಯಿತೆಂದರೆ ಹೊರಡಿ ಎನ್ನುತ್ತಾಳೆ. ಆಕೆ ಪ್ರಾಯಶಃ ಅಷ್ಟು ಕಟ್ಟುನಿಟ್ಟಾಗಿರದಿದ್ದರೆ ಸರದಾರರು ಅಷ್ಟು ಜನರನ್ನು ಭೇಟಿಮಾಡಿ, ಅವರಿಗೆ ಸೂಕ್ತ ಸಲಹೆಗಳನ್ನು ಹೇಳುವುದು ಕಷ್ಟವಾಗುತ್ತಿತ್ತು. ಅವರನ್ನು ನೋಡಲು ನಾವು ೪ ಗಂಟೆಗೇ ಹೊರಡಬೇಕು. ಮೈಮೇಲೆ ಒಂದು ಶಾಲು ಮಡಿಚಿ ಹಾಕಿಕೊಂಡು, ಬೋಳು ತಲೆ, ಕಾಲಿಗೆ ಚಪ್ಪಲಿ, ಧೋತ್ರ, ಜುಬ್ಬ ಹಾಕಿಕೊಂಡು –ಆ ಕೊರೆಯುವ ಚಳಿಯಲ್ಲಿ ನಮ

ಗಿಂತ ಮುಂದೆ ನಡೆಯುತ್ತ ಹೋಗುತ್ತಾರೆ. ಪ್ರಾಂತಗಳ ಪ್ರಧಾನಿಗಳು, ರಾಜರುಗಳು, ರಾಜಮಂತ್ರಿಗಳು, ಕಾಂಗ್ರೆಸ್ ನಾಯಕರು, ನಿರಾಶ್ರಿತರು, ಶ್ರೀಮಂತರು—ಎಲ್ಲರಿಗೂ ಇಲ್ಲೇ ಭೇಟಿ. ೭ ಗಂಟೆವರೆಗೆ ಈ ರೀತಿ ತಿರುಗಾಟ. ಪಂಡಿತರೂ ಅಷ್ಟೇ! ರಾತ್ರಿ ಮಲಗುವುದು ೨ ಗಂಟೆ ಯಾಗುತ್ತಂತೆ! ಆಗ ಅವರು ವರ್ತಮಾನ ಪತ್ರಿಕೆಗಳಲ್ಲಿ ಬಂದ ಮುಖ್ಯ ವಿಷಯಗಳನ್ನು ಓದುತ್ತಾರಂತೆ. ಅಂತೂ ಅವರುಗಳಿಗೆ ಬಿಡುವಿಲ್ಲದ ಕೆಲಸ.

೩೦-೧೧-೪೭

ನಾನು ೨೩-೧೧-೪೭ಕ್ಕೆ ಬರೆದ ಕಾಗದದಲ್ಲಿ ನಿಜಲಿಂಗಪ್ಪ ನವರ ಬಂಗಲೆಗೆ ಹೋಗುತ್ತೇನೆ ಎಂದು ಬರೆದಿದ್ದೆ; ಅಲ್ಲಿಂದಲೇ ಈ ಪತ್ರ ಬರೆಯುತ್ತಿದ್ದೇನೆ. ನಿಜಲಿಂಗಪ್ಪನ ಜತೆಗೆ ಇದ್ದರೆ ಯಾವ ಕೆಲಸಕ್ಕೂ ಬಿಡುವೇ ದೊರೆಯುವುದಿಲ್ಲ. ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿ, ದೇಶೀಯ ಸಂಸ್ಥಾನಗಳ ಪ್ರಶ್ನೆ, ಕರ್ನಾಟಕ ಏಕೀಕರಣ, ದಕ್ಷಿಣ ಸಂಸ್ಥಾನಗಳ ಒಕ್ಕೂಟ, ಮೈಸೂರು ಕಾಂಗ್ರೆಸ್ ಕೆಲಸ—ಅಂತೂ ಒಂದಲ್ಲ ಒಂದು. ಆತ ವಿಶ್ವಕುಟುಂಬಿ. ಬಂದವರನ್ನು ಮಾತನಾಡಿಸುವುದು, ಉಪಚಾರ ಮಾಡುವುದು, ಚರ್ಚೆಮಾಡುವುದು—ಇದರಲ್ಲೇ ಕಾಲವೆಲ್ಲ ಕಳೆಯುತ್ತೆ. ಸಾಲದ್ದಕ್ಕೆ ಈಗ ಚಳಿಯೂ ಹೆಚ್ಚಾಗುತ್ತಿದೆ. ದಕ್ಷಿಣ ಸಂಸ್ಥಾನಗಳ ಪರವಾಗಿ ಶ್ರೀ ಹೆಚ್. ಕೆ. ವೀರಣ್ಣಗೌಡರು, ಶ್ರೀ ಬಾಪುರೆಯವರು ಮುಂತಾದವರು ಬಂದಿದ್ದಾರೆ. ದಕ್ಷಿಣ ಸಂಸ್ಥಾನಗಳೆಂದರೆ ಸಾಂಗಲಿ, ಜಮುಜಂಡಿ, ಮೀರಜ್, ರಾಮದುರ್ಗ ಮುಂತಾದ ಸಣ್ಣ ಸಣ್ಣ ಕನ್ನಡ ಮತ್ತು ಮಹಾರಾಷ್ಟ್ರ ಸಂಸ್ಥಾನಗಳು. ಇದರಲ್ಲಿ ಕರ್ನಾಟಕ—ಮಹಾರಾಷ್ಟ್ರ ಪ್ರಶ್ನೆಯೂ ಇದೆ. ರಾಜರು—ಪ್ರಜೆಗಳ ಪ್ರಶ್ನೆಯೂ ಇದೆ. ಸ್ವಲ್ಪ ಕೋಮುವಾರು ಪ್ರಶ್ನೆಯೂ ಇದೆ. ಕರ್ನಾಟಕ ಏಕೀಕರಣದ ಸಲುವಾಗಿ ಮಂಗಳವೇಡು ಶ್ರೀನಿವಾಸರಾಯರು ಬಂದಿದ್ದಾರೆ. ಇವರಲ್ಲದೆ ಕಾಶ್ಮೀರದ ಕೆಲವು ನಿರಾಶ್ರಿತ ಮುಸಲ್ಮಾನರು ಬಂದಿದ್ದಾರೆ. ಎಲ್ಲರಿಗೂ ಜಾಗ ನಮ್ಮ ಬಂಗಲೆಯಲ್ಲೆ.

ದಕ್ಷಿಣ ಭಾರತ ಸಂಸ್ಥಾನಗಳ ಅರಸರು ಕೆಲವರು ಬಂದು ಯೂನಿಯನ್ ಮಾಡಿಕೊಳ್ಳಬೇಕೆಂದಿದ್ದಾರೆ. ಅವರಲ್ಲೇ ಒಬ್ಬರು ರಾಜ ಪ್ರಮುಖರು, ಇನ್ನೊಬ್ಬರು ಉಪರಾಜ ಪ್ರಮುಖರು. ಅವರಿಗೆ ಸಲ್ಲಬೇಕಾದ ರಾಜ ಸಂಭಾವನೆ (privy purse), ಇತರ ರಾಜರುಗಳ ಸಂಭಾವನೆ, ಹೈಕೋರ್ಟು, ಸೈನ್ಯ ಇವೆಲ್ಲ ರಾಜಪ್ರಮುಖರ ಕೈಯಲ್ಲಿ, ಉಳಿದ ಅಧಿಕಾರಗಳು ಪ್ರಜೆಗಳಿಗೆ. ಇಷ್ಟೆಲ್ಲ ಕೊಟ್ಟಮೇಲೆ ಪ್ರಜೆಗಳ ಅನುಕೂಲಕ್ಕಾಗಿ ಉಳಿಯುವ ಹಣ ಬಹಳ ಸ್ವಲ್ಪ. ಈ ಸಂಸ್ಥಾನಗಳು ಒಂದು ಕಡೆಯೂ ಇಲ್ಲ. ಬೆಳಗಾವಿ, ಧಾರವಾಡ, ಬಿಜಾಪುರ, ಸಾತಾರ, ಸೊಲ್ಲಾಪುರ ಈ ರೀತಿ ನಾಲ್ಕಾರು ಜಿಲ್ಲೆಗಳಲ್ಲಿ ತುಂಡು ತುಂಡಾಗಿ ಹಂಚಿವೆ. ಅರಸರೆಲ್ಲ ಮರಾಠಾ ಬ್ರಾಹ್ಮಣರು. ಕೊಲ್ಲಾಪುರ ಇದಕ್ಕೆ ಸೇರಿಲ್ಲ. ಅದು ಮರಾಠಾ ಅರಸರಿರುವ ಸಂಸ್ಥಾನ. ಈ ಒಕ್ಕೂಟ ಪ್ರಜೆಗಳಿಗೆ ಬೇಕಿಲ್ಲ. " ಪಟೇಲರು ಮತ್ತು ಗಾಂಧೀಜಿ ಈ ಒಕ್ಕೂಟಕ್ಕೆ ಒಪ್ಪಿದ್ದಾರೆ ಎಂದು ಅರಸರುಗಳು ಹೇಳುತ್ತಿದ್ದಾರೆ. ಇದು ಪ್ರಜೆಗಳಿಗೆ ಬೇಕಿಲ್ಲ. ಈ ಸಂಸ್ಥಾನಗಳು ಬೊಂಬಾಯಿ ಆಧಿಪತ್ಯದಲ್ಲೇ ಸೇರಿದರೆ ಪ್ರಜೆಗಳಿಗೆ ಅನುಕೂಲ. ಕರ್ನಾಟಕ ಪ್ರಾಂತವಾದರೆ ಕನ್ನಡ ಪ್ರಜೆಗಳು ಕರ್ನಾಟಕಕ್ಕೆ ಸೇರಬಹುದು. ಮಹಾರಾಷ್ಟ್ರ ಪ್ರಜೆಗಳು ಮಹಾರಾಷ್ಟ್ರ ಪ್ರಾಂತಕ್ಕೆ ಸೇರಬಹುದು. ಪ್ರಜೆಗಳ ಇಷ್ಟದಂತೆ ಇತ್ಯರ್ಥಮಾಡಿ" ಎಂದು ಸರದಾರರನ್ನೂ ಗಾಂಧೀಜಿಯವರನ್ನೂ ಕಂಡು ಹೇಳಲು ಶ್ರೀ ವೀರಣ್ಣಗೌಡರು ನಿಯೋಗದ ನಾಯಕತ್ವ ವಹಿಸಿ ಬಂದಿದ್ದಾರೆ. ಮೊನ್ನೆ ಸರದಾರರನ್ನು ನೋಡಲು ಹೋಗಿದ್ದೆವು. ನಾನು ಒಕ್ಕೂಟಕ್ಕೆ ಒಪ್ಪಿಗೆ ಕೊಟ್ಟಿಲ್ಲ. ಆರಂಭೋತ್ಸವವನ್ನು ನೆರವೇರಿಸಲು ಬರಲೇ ಬೇಕೆಂದು ಕೇಳಿದ್ದರು. ನನಗೆ ಬಿಡುವಿಲ್ಲ ಎಂದು ಹೇಳಿದೆ. "ಪ್ರಜೆಗಳಿಗೆ ಇಷ್ಟವಿಲ್ಲದಿದ್ದರೆ ಅಂಥ ಒಕ್ಕೂಟದಿಂದ ಏನು ಪ್ರಯೋಜನ? —ಪ್ರಜೆಗಳು ವಿರೋಧಿಸಲಿ" ಎಂದರು. ಇದೇ ಸಂದರ್ಭದಲ್ಲಿ ಗಾಂಧೀಜಿಯನ್ನು ನೋಡಲು ಹೋದಾಗ ಬಿರ್ಲಾಭವನದ ಹಿಂಭಾಗದಲ್ಲಿ ಬರ್ಮಾ ಪ್ರಧಾನಿ ತಾಕಿನ್ಯು ಕೊಟ್ಟ ಹುಲ್ಲಿನ ಟೋಪಿ (hat) ಧರಿಸಿ

ಮಾತನಾಡುತ್ತ ಕುಳಿತಿದ್ದರು. ಶ್ರೀ ವೀರಣ್ಣಗೌಡರಿಗೆ "ಹಿಂದಿ ಬರುವುದಿಲ್ಲ; ಇಂಗ್ಲಿಷ್‌ನಲ್ಲಿ ಮಾತನಾಡುತ್ತಾರೆ" ಎಂದಾಗ ನಿಯೋಗದ ನಾಯಕತ್ವ ವಹಿಸಲು ಅವರಿಗೆ ಅಧಿಕಾರವೇ ಇಲ್ಲ ಎಂದು ನಗು ನಗುತ್ತಲೇ ಮೂದಲಿಸಿ "ಆಗಲಿ, ಮಾತನಾಡಿ" ಎಂದರು. ಬಲಗೈ ಹೆಬ್ಬೆಟ್ಟಿಗೆ ಮಣ್ಣಿನ ಪೋಟ್ಲೀಸ್ ಕಟ್ಟಿದ್ದರು. "ಅದೇನು ಬಾಪೂಜಿ?" ಎಂದು ನಿಜಲಿಂಗಪ್ಪ ಕೇಳಿದಾಗ, "ನನ್ನ ಸ್ನೇಹಿತರು ಮನುಷ್ಯ ವರ್ಗದಲ್ಲಿ ಮಾತ್ರವಿಲ್ಲ. ಪಕ್ಷಿವರ್ಗದಲ್ಲೂ ಇದ್ದಾರೆ. ಈ ದಿನ ಬೆಳಿಗ್ಗೆ ರೊಟ್ಟಿ ತಿನ್ನುತ್ತ ಕುಳಿತಿದ್ದೆ. ಮೇಲಿನಿಂದ ಒಂದು ಹಕ್ಕಿ ಅವನ್ನು ನೋಡಿ 'ಎಷ್ಟು ಸ್ವಾರ್ಥ ಈತನಿಗೆ. ನನಗೆ ಕೊಡದೆ ಒಬ್ಬನೇ ತಿನ್ನುತ್ತಾನೆ' ಎಂದು ಕೆಳಗೆ ಇಳಿದು, ನನ್ನ ಕೈಯೊಳಗಿನ ರೊಟ್ಟಿ ಚೂರನ್ನು ಕಸಿದುಕೊಂಡು ಹೋಯಿತು. ಹೋಗುವಾಗ ನನ್ನ ಬೆರಳಿಗೂ 'ಮರೆಯಬೇಡ' ಎಂದು ಸ್ವಲ್ಪ ಕುಕ್ಕಿಹೋಯಿತು. ಅದಕ್ಕೆ ಪೋಟ್ಲೀಸ್ ಕಟ್ಟಿದ್ದೇನೆ. ಈಗ ನೋವು ಏನೂ ಇಲ್ಲ" ಎಂದರು. ದಕ್ಷಿಣ ಭಾರತದ ಸಂಸ್ಥಾನಗಳ ಒಕ್ಕೂಟದ ವಿಷಯ ತಿಳಿಸಿದಾಗ, "ನನಗೆ ಒಕ್ಕೂಟದ ವಿಷಯವೇ ತಿಳಿಯದು. ಅವರ ಮಸೂದೆಯನ್ನು ನಾನು ನೋಡಿಲ್ಲ. ರಾಜರು ನನ್ನಲ್ಲಿಗೆ ಬಂದಾಗ ನಿಮ್ಮ ಪ್ರಜೆಗಳು ಒಪ್ಪುವಂತೆ ನಡೆದುಕೊಳ್ಳಿ ಎಂದು ಹೇಳಿ ಕಳುಹಿಸಿದೆ. ಪ್ರಜೆಗಳ ಅಭಿಪ್ರಾಯಕ್ಕೇ ಪ್ರಾಧಾನ್ಯತೆ ದೊರೆಯಬೇಕು. ಅವರಿಗೆ ಇಷ್ಟವಿಲ್ಲದಿದ್ದರೆ ಬೇಡ" ಎಂದರು.

ನಿನ್ನೆ ಹುಣ್ಣಿಮೆ. ಆಗ್ರಾಕ್ಕೆ ಏಕೆ ಹೋಗಬಾರದು ಎನಿಸಿತು. ಮೊನ್ನೆ ರಾತ್ರಿ ತೀರ್ಮಾನಿಸಿ, ನಿನ್ನೆ ಬೆಳಿಗ್ಗೆ ಹೊರಟೇ ಬಿಟ್ಟೆವು. ಹೊರಡುವ ಮುಂಚೆ ಶ್ರೀ ಅನಂತರಾಯರಿಗೆ ಟೆಲಿಗ್ರಾಂ ಕೊಟ್ಟು ಹೊರಟೆವು—ನಾನು, ಶ್ರೀನಿವಾಸರಾಯರು, ಬಾಪುರೆ ಮತ್ತು ಅವರ ಸ್ನೇಹಿತರು. ಗಾಡಿ ಸಿಕ್ಕದೆ ಕೊನ್ನಾಲ್ ಸರ್ಕಲ್‌ನಿಂದ ಮೋಟಾರು ಮಾಡಿದರೆ ಹತ್ತು ರೂಪಾಯಿ ತೆಗೆದುಕೊಂಡ. ರೈಲೇನೋ ಸಿಕ್ಕಿತು. ಆಗ್ರಾಕ್ಕೆ ೧೨-ಘಂಟೆಗೆ ಬರುವ ರೈಲು ೧-ಘಂಟೆಗೆ ತಲಪಿತು. ಮೊದಲನೆ

ಸ್ಟೇಷನ್ ರಾಜಾ-ಕಿ-ಮಂಡಿಯಲ್ಲೇ ಇಳಿದೆವು. ಅನಂತರಾಯರು ಬಂದಿರಲಿಲ್ಲ. ಆಗ್ರಾ ಕಂಟೋನ್‌ಮೆಂಟ್, ಆಗ್ರಾ ಫೋರ್ಟ್ ಎಂತ ಇನ್ನೂ ಎರಡು ಸ್ಟೇಷನ್‌ಗಳು ಇವೆ. ಆಗ್ರಾ ಬಹು ದೊಡ್ಡ ಪಟ್ಟಣ. ಮೊಗಲರ ರಾಜಧಾನಿಯಾಗಿತ್ತು. ಎಲ್ಲಿಗೆ ಹೋಗೋಣವೆಂದು ನೋಡುತ್ತಿರುವಾಗ ಕಾಶೀನಾಥ್ ಅಂತ ಒಬ್ಬ ಸಿಕ್ಕ. ಹೈದರಾಬಾದಿನವನಂತೆ—ಕನ್ನಡ ಬರುತ್ತಿತ್ತು. ಸ್ಟೇಷನ್ ಪಕ್ಕದಲ್ಲೆ ಒಂದು ಹೋಟೆಲಿಗೆ ಕರೆದುಕೊಂಡು ಹೋದ. ಶ್ರೀನಿವಾಸರಾಯರು ಊಟವನ್ನೇ ಮಾಡಲಿಲ್ಲ—ಹಸಿವು ಇಲ್ಲ ಎಂದರು. ನಾವೇನೋ ಮೂರು ಊಟ ತರಿಸಿ, ಊಟ ಹೊಡೆದು, ಸಾಮಾನು ಅಲ್ಲೇ ಒಂದು ಕೋಣೆಯಲ್ಲಿ ಹಾಕಿ ಎರಡು ಟಾಂಗಾ ಮಾಡಿ ಹೊರಟೆವು. ಈಕಡೆಯ ಟಾಂಗಾಗಳು ಬಹಳ ಚೆನ್ನಾಗಿವೆ. ನಮ್ಮಲ್ಲಿಯ ಕುದುರೆಗಳಂತೆ ಕುಂಟುತ್ತ ಹಿಂದೆ ಹಿಂದಕ್ಕೆ ಹೋಗುವುದಿಲ್ಲ. ಎತ್ತರವಾದ ದೊಡ್ಡ ಕುದುರೆಗಳು—ಚೆನ್ನಾಗಿ ಓಡುತ್ತವೆ. ಆಗ್ರಾದಲ್ಲಿ ಇನ್ನೊಂದು ಬಗೆಯ ಗಾಡಿಗಳಿವೆ. ಟಾಂಗಾ ಬದಲು—ನಮ್ಮಲ್ಲಿ ವೀರಶೈವರು ಕೈಲಾಸಯಾತ್ರೆಗೆ ಸಿದ್ದಿಗೆ ಕಟ್ಟಿದಂತೆ ಮಂಟಪಗಳಿರುವ ಗಾಡಿಗಳಿವೆ. ಮಧ್ಯೆ ಒಬ್ಬ ಕುಳಿತು ತೂರಿ ಹೋಗುತ್ತಾನೆ. ಮುಂದೆ ಸಾರಥಿ ಕಡೆದ ಕಾಲುಗಳು—ಶ್ರೀಮಂತರಾದರೆ ಪಲ್ಲಕ್ಕಿಯಂತೆ ಗೊಂಡೆಗಳನ್ನು ಕಟ್ಟಿರುತ್ತಾರೆ—ತಮಾಷೆಯಾಗಿರುತ್ತೆ. ಮೊದಲು ಅನಂತರಾಯರನ್ನು ಹುಡುಕುವ ಎಂದು ಸಿವಿಲ್ ಲೈನ್ಸ್‌ಗೆ ಮೂರು ಮೈಲಿ ಉದ್ದ ಹೋದೆವು! ಎಲ್ಲಿ ಹುಡುಕೋದು? ಕೊನೆಗೆ ಅವರ ಕಾಲೇಜಿನಲ್ಲೆ ಇರುವ ಒಬ್ಬ ಅಧ್ಯಾಪಕರು ಸಿಕ್ಕರು. ಅವರು—ಆಗ್ರಾ ಕಾಲೇಜ್ ಪ್ರಿನ್ಸಿಪಾಲ್ ಮನೆ ಎದುರು ಅವರ ಮನೆ ಇದೆ ಎಂದರು. ಅವರ ಕಾಲೇಜು—ಅಲ್ಲಿಯೇ ರಜಪೂತ್ ಕಾಲೇಜ್ ಎಂದು ಕೈ ತೋರಿಸಿದರೆ—ಸುತ್ತಿಹೋಗಲು ಅರ್ಧಮೈಲಿ. ಇಷ್ಟು ಹೊತ್ತಿಗೆ ೨-೩೦. ಶ್ರೀನಿವಾಸರಾಯರಿಗೆ ಊರು ನೋಡುವ ಹಂಬಲ. ಒಂದೊಂದು ನಿಮಿಷಕ್ಕೂ ಬೆಲೆ ಕಟ್ಟುವವರು—ಟಾಂಗಾ ಒಂದಕ್ಕೆ ಹತ್ತು ರೂಪಾಯಿ. ಕೊನೆಗೆ ಎಲ್ಲಾ ನೋಡಿ

ಸಿಕ್ಕರೆ ಹಿಂದಿರುಗುವಾಗ ನೋಡೋಣ—ಇಲ್ಲವಾದರೆ ನಮ್ಮ ಛತ್ರಕ್ಕೇ ಆಯಿತು ಎಂದು ಹೊರಟೆವು. ಮೊದಲು ದೆಹಲಿ ಮಾರ್ಗದಲ್ಲಿರುವ "ಸಿಕಂದರ"ಕ್ಕೆ ಹೊರಟೆವು. ಸಿಕಂದರ ಅಕ್ಬರನ ಗೋರಿ. ಸಿಕಂದರ ಎಂದರೆ "ಜಯಶಾಲಿ" ಎಂದು. ಎದುರಿಗೆ ದೊಡ್ಡ ಹೆಬ್ಬಾಗಿಲು—ನಾಲ್ಕು ಮೂಲೆಗೂ ನಾಲ್ಕು ಗೋಪುರಗಳು. ಹೆಬ್ಬಾಗಿಲಿನಿಂದ ಗೋರಿ ಇರುವ ಭವನಕ್ಕೆ ಸುಮಾರು ಒಂದು ಫರ್ಲಾಂಗ್ ದೂರವಿದೆ. ಉದ್ದಕ್ಕೂ ಹೂದೋಟ. ಗೋರಿ ಇರುವ ಭವನ ಮೂರು ಅಂತಸ್ತಿದೆ. ಕೆಳಗೆ ನಿಜವಾದ ಗೋರಿ ಇದೆ. ಮೇಲೆ ಇರುವ ಗೋರಿ ಸುಮ್ಮನೆ ಅಲಂಕಾರಕ್ಕೆ ಮಾಡಿದ್ದು. ಎಲ್ಲವೂ ಕೆಂಪು ಸಾಣೆ ಕಲ್ಲು ಮತ್ತು ಅಮೃತಶಿಲೆಯಲ್ಲಿ ಕಟ್ಟಿದ್ದು. ಪಾರಶಿ ಶಿಲ್ಪಕಲೆಯ ಭವ್ಯತೆಯ ಸೊಬಗನ್ನು ಇಲ್ಲಿ ಕಾಣಬಹುದು. ಸುತ್ತಲೂ ಪ್ರಾಕಾರ, ಹೂತೋಟ, ಹೆಬ್ಬಾಗಿಲಿನಂತೆ ಗೋಪುರಗಳು. ಮೂರನೆ ಅಂತಸ್ತಿನಲ್ಲಿ ನಿಂತು ನೋಡಿದರೆ ದೂರದಲ್ಲಿ ಹದಿನೈದು ಮೈಲಿಗಳಾಚೆ ದಿಗಂತದ ನೀಲಿಮತೆಯ ಹಿನ್ನೆಲೆಯಲ್ಲಿ ಮುಸುಕಿನೊಳಗಿನ ಮಾಯಾಂಗನೆಯ ಮನಮೋಹಕ ಸೌಂದರ್ಯ ರಾಶಿಯಂತೆ 'ತಾಜಮಹಲ್' ಮಸಕು ಮಸಕಾಗಿ ಕಾಣುತ್ತ, ನಮ್ಮ ಮನಸ್ಸನ್ನು ಸೆಳೆಯುತ್ತದೆ. ಅಲ್ಲಿಂದ ನೇರವಾಗಿ ಆಗ್ರಾ ಪಟ್ಟಣದ ಇನ್ನೊಂದು ತುದಿಯಲ್ಲಿರುವ "ಇತ್-ಮದ್ದೌಲ"ಕ್ಕೆ ಹೊರಟೆವು. ಸಿವಿಲ್ ಲೈನ್ಸ್ ಮತ್ತು ಆಗ್ರಾ ಪಟ್ಟಣ ದಾಟಿ ಯಮುನಾ ನದಿಯನ್ನು ದಾಟಿ ಹೋಗಬೇಕು. ಇಲ್ಲಿಯೂ ಕೆಳಗೆ ಜನರ ಮತ್ತು ವಾಹನ ಸಂಚಾರ—ಮೇಲೆ ರೈಲುಗಳ ಓಡಾಟಕ್ಕೆ ಅನುಕೂಲವಾದ ಸೇತುವೆ. ನಮ್ಮಲ್ಲಿಯೂ ರೈಲ್ವೆ ಸೇತುವೆಗಳನ್ನು ಕಟ್ಟುವಾಗ ಈ ರೀತಿ ಸೇತುವೆಗಳನ್ನು ಕಟ್ಟಿದರೆ ಒಂದೇ ಏಟಿನಲ್ಲಿ ಎರಡು ಗುರಿ ಸಾಧಿಸಬಹುದು. ಯಮುನಾ ನದಿಯ ಪಾತ್ರ ಇಲ್ಲಿ ಇನ್ನೂ ದೊಡ್ಡದಾಗಿದೆ. ನೀರಿನ ಆಳವೂ ಹೆಚ್ಚು. ಕಪ್ಪು ಮರಳು—ಕಪ್ಪು ನೀರು. ಸೇತುವೆಯ ಆಚೆ ಒಂದು ಒಂದೂವರೆ ಮೈಲಿ ಹೋದರೆ ನದಿಯ ದಡದ ಮೇಲೆಯೆ "ಇತ್‌ಮದ್ದೌಲ"—ಇದೂ ಒಂದು ಗೋರಿ.

"ಇತ್‌ಮುದ್ದೌಲ" ಎಂದರೆ "ಪ್ರಧಾನ ಮಂತ್ರಿ" ಎಂದು. ಚಕ್ರವರ್ತಿನಿ ನೂರ್‌ಜಹಾನ್ ತನ್ನ ತಂದೆ ಮಿರ್ಜಾ ಘಯೂಸುದ್ದೀನನ ಸ್ಮಾರಕಾರ್ಥವಾಗಿ ಕಟ್ಟಿದ್ದು. ಪೂರ್ವದ ಕಡೆ ಬಾಗಿಲು. ಒಳಗಡೆ ಕಟ್ಟಡ ಚಿಕ್ಕದಾದರೂ ಬಹಳ ನಾಜೂಕಿನ ಕೆತ್ತನೆ ಕೆಲಸ ಮಾಡಿದ್ದಾರೆ. ಬಿಳಿಯ ಕಲ್ಲಿನಲ್ಲಿ ಬಣ್ಣ ಬಣ್ಣದ ಕಲ್ಲುಗಳನ್ನು ಜೋಡಿಸಿ—ಹೂಗಳು, ಬಳ್ಳಿಗಳು, ಹಕ್ಕಿಗಳನ್ನು ಬಿಡಿಸಿರುವ ಕುಸುರಿ ಕೆಲಸವು ಅತ್ಯಾಶ್ಚರ್ಯವನ್ನು ಉಂಟುಮಾಡುತ್ತದೆ. ಹಿಂದೆಯೇ ಗಂಭೀರವಾಗಿ ಹರಿಯುವ ಯಮುನಾ ನದಿ. ನದಿಯ ಆಚೆ—ನಗರದ ಉನ್ನತ ಸೌಧಗಳ ಸಾಲು. 'ಇತ್‌ಮುದ್ದೌಲ'ದ ಕೆತ್ತನೆ ಕೆಲಸವನ್ನೂ ಪ್ರಾಯಶಃ ಚಿತ್ರದಲ್ಲಿ ಬರೆದರೂ ಅಷ್ಟು ಸುಂದರವಾಗಿ ಕಾಣಲಾರದು. ಒಂದೊಂದು ಕಂಬವೂ ಒಂದೊಂದು ವಿಧ. ಒಂದೊಂದು ಗೋಡೆಯ ಕೆತ್ತನೆಯೂ ಒಂದೊಂದು ವಿಧ. ಆ ಹೂಗಳ, ಬಳ್ಳಿಗಳ, ಹಕ್ಕಿಗಳ ಕಲ್ಪನೆಯನ್ನು ಎಲ್ಲಿಂದ ಮಾಡಿಕೊಂಡರೊ—ಅದೇ ಒಂದು ಆತ್ಯಾಶ್ಚರ್ಯ. ಅವರ ಪ್ರಕೃತಿಜ್ಞಾನಕ್ಕೆ ಇದು ಒಂದು ಸುಂದರ ಸಾಕ್ಷಿ. ಎಷ್ಟು ನೋಡಿದರೂ ತೃಪ್ತಿಯಾಗುವುದಿಲ್ಲ. ಕಲಾವಿದರಿಗೆ ನಿಜವಾಗಿಯೂ—ಇದೊಂದು ಯಾತ್ರಾಸ್ಥಳ. ಇಷ್ಟು ಹೊತ್ತಿಗೆ ಸಂಜೆ ೫ ಗಂಟೆ ಇರಬಹುದು. ಇಳಿ ಬಿಸಿಲಿನ ಹೊಂಬಣ್ಣವು ಯಮುನೆಯ ತೀರದ ಈ ಅದ್ಭುತ ಕಲಾಕೃತಿಗೆ ಒಂದು ಹೊಸ ಸೊಬಗನ್ನು ಕೊಡುತ್ತಿತ್ತು. ಇನ್ನೂ ಆಗ್ರಾ ಕೋಟೆಯನ್ನು ನೋಡಿ, ಚಂದ್ರ ಮೂಡುವ ಹೊತ್ತಿಗೆ 'ತಾಜ್ ಮಹಲ್'ಗೆ ಹೋಗಬೇಕಿತ್ತು. ಮನಸ್ಸನ್ನೆಳೆದು ಹೊರಬಿದ್ದು, ಆಗ್ರಾ ಕೋಟೆಗೆ ಬಂದೆವು. ನದಿಯನ್ನು ದಾಟಿ ಹಿಂದಕ್ಕೆ ಬಂದು ಆಗ್ರಾ ಕೋಟೆಯ ಹೆಬ್ಬಾಗಿಲು ಬಳಿ ಬರುವ ಹೊತ್ತಿಗೆ ೬ ಗಂಟೆ. ಪುಣ್ಯಕ್ಕೆ ಇನ್ನೂ ಬಾಗಿಲು ಹಾಕಿರಲಿಲ್ಲ. ತಲೆಗೆ ಎರಡಾಣೆ ಟಿಕೆಟ್ ಪಡೆದು ಒಳಗೆ ಹೋದೆವು.

ಕೋಟೆ ಬಾಗಿಲ ಹತ್ತಿರ ಬರುವುದಕ್ಕೆ ಸುಮಾರು ೨ ಮೈಲಿ ಸುತ್ತಬೇಕು. ಬಹು ದೊಡ್ಡ ಕೋಟೆ. ಸುತ್ತಲೂ ವಿಶಾಲವಾದ

ಆಳವಾದ ಕಂದಕ. ಮಲ್ಲಿಗೆ ಮಂಟಪ (jasmine tower) ಎಂಬ ಎಂಬ ಅರಮನೆಯಿಂದ ಯಮುನೆಯ ಮಂದಗತಿಯನ್ನೂ ದೂರದ ತಾಜಮಹಲಿನ ಸೊಬಗನ್ನೂ ಮೊಗಲ್ ಚಕ್ರವರ್ತಿಗಳು ನೋಡುತ್ತ ಕುಳಿತಿರುವಾಗ ಎದುರಿನ ಈ ಕಂದಕದ ಬಯಲಿನಲ್ಲಿ ಆನೆಗಳ ಯುದ್ಧ ವಾಗುತ್ತಿತ್ತಂತೆ! ಅಂದರೆ ಅದರ ಆಳ ಮತ್ತು ವೈಶಾಲ್ಯ ಎಷ್ಟಿರ ಬಹುದೆಂದು ನೀನೇ ಊಹಿಸು. ಕಲ್ಲಿನ ಕೋಟೆಯ ಗೋಡೆ ಇನ್ನೂ ಭದ್ರವಾಗಿ ಉಳಿದಿದೆ. ಗೋಡೆಯ ಎತ್ತರ ೫೦-೭೦ ಅಡಿ ಇರಬಹುದು. ಸುತ್ತಲೂ ಗೋಪುರಗಳು, ಬತೇರಿಗಳು. ಕೋಟೆಯ ಹೆಬ್ಬಾಗಿಲನ್ನು ಪ್ರವೇಶಿಸುತ್ತಲೆ ಮೇಲೆ ಏರಿದರೆ ದೊಡ್ಡ ಮೈದಾನ. ಮುಂದೆ— ಅರಮನೆಯ ವಿವಿಧ ಭಾಗಗಳು. ಇಲ್ಲಿಯೂ ಸಾರ್ವಜನಿಕರ ಸಭಾ ಮಂದಿರ (ದಿವಾನಿ ಖಾಸ್), ಶ್ರೀಮಂತರ ಸಭಾಮಂದಿರ (ದಿವಾನಿ ಆಮ್), ಮುತ್ತಿನ ಮಸೀದಿ (ಮೋತಿ ಮಸ್ಜಿದ್), ಮಲ್ಲಿಗೆ ಮಂಟಪ, ಅಂಗೂರಿ ಬಾಗ್, ಸ್ನಾನದ ಮನೆಗಳು, ಮುಸ್ಲಿಂ ರಾಣಿವಾಸ, ಹಿಂದೂ ರಾಣಿ ವಾಸ, ರಂಗಮಹಲ್ ಇವೆ. ಎಲ್ಲವೂ ಅಮೃತ ಶಿಲೆಯಲ್ಲಿ ಕಟ್ಟಿದ ಕಟ್ಟಡಗಳು. ದೆಹಲಿಯ ಅರಮನೆಗಿಂತ ಇಲ್ಲಿನ ಕಟ್ಟಡದ ಕೆಲಸ ಭವ್ಯವಾಗಿ, ನಯವಾಗಿ, ಅಂದವಾಗಿ ಇವೆ. ಮಲ್ಲಿಗೆ ಮಂಟಪದ ಒಂದು ಕಂಬದಲ್ಲಿ ಒಂದು ನಯವಾದ ಲೋಹದ ತಗಡನ್ನು ಜೋಡಿಸಿದ್ದಾರೆ. ಅದರಲ್ಲಿ ದೂರದ ತಾಜಮಹಲಿನ ಪ್ರತಿಬಿಂಬವು ಕಾಣುತ್ತದೆ. ರಂಗಮಹಲಿನಲ್ಲಿ ಮೇಲುಗಡೆ ಬಣ್ಣ ಬಣ್ಣದ ಗಾಜಿನ ಚೂರುಗಳನ್ನೂ ಜೋಡಿಸಿದ್ದಾರೆ. ಒಳಗೆ ದೀಪ ಹಚ್ಚಿದರೆ ಬಣ್ಣ ಬಣ್ಣದ ಬೆಳಕು ಪ್ರತಿಬಿಂಬಿತವಾಗುತ್ತದೆ. ಇದರ ಕೆಳಗೆ ಬಿಸಿ ನೀರಿನ ತಣ್ಣೀರಿನ ಬುಗ್ಗೆಗಳಿರುವ ಸ್ನಾನದ ತೊಟ್ಟಿಗಳಲ್ಲಿ ರಾಣಿವಾಸದವರೂ ಸ್ನಾನಮಾಡಿ ಅಲಂಕಾರ ಮಾಡಿಕೊಳ್ಳುತ್ತಿದ್ದರಂತೆ. ಔರಂಗಜೇಬನು ಪಟ್ಟಕ್ಕೆ ಬಂದಾಗ ತನ್ನ ತಂದೆಯಾದ ಷಹಜಹಾನನ ಕಣ್ಣುಗಳನ್ನು ಕೀಳಿಸಿ, ಕುರುಡನನ್ನಾಗಿ ಮಾಡಿ, ಬಂಧನದಲ್ಲಿರಿಸಿ, ತನ್ನ ಅಣ್ಣ ತಮ್ಮಂದಿರನ್ನು ಕೊಂದು ಸಿಂಹಾಸನವನ್ನು ಏರಿದ. ಷಹಜಹಾನನು

ಬಂದಿಯಾಗಿದ್ದ ಸ್ಥಳವನ್ನೂ, ಅವನಿಗೆ ಅಲ್ಲಿಯೇ ನಮಾಜು ಮಾಡಲು ಕಟ್ಟಿದ ಸಣ್ಣ ಮಸೀದಿಯನ್ನೂ ತೋರಿಸುತ್ತಾರೆ. ಅಕ್ಬರ್ ಜಹಾಂಗೀರ್ ಇಬ್ಬರೂ—ಹಿಂದೂಗಳ ಬೆಂಬಲವಿದ್ದರೆ ಮಾತ್ರ ತಮ್ಮ ರಾಜ್ಯ ಉಳಿಯುತ್ತೆಂದು ನಂಬಿ ರಜಪೂತ ರಾಣಿಯರನ್ನು ಮದುವೆಯಾಗಿದ್ದರು. ಅನೇಕ ಹಿಂದೂ ರಾಜರುಗಳು ಅವರ ಸೈನ್ಯದಲ್ಲಿ, ರಾಜ್ಯಾಡಳಿತದಲ್ಲಿ, ಉನ್ನತ ಅಧಿಕಾರ ಸ್ಥಾನದಲ್ಲಿದ್ದರು. ಹಿಂದೂ ರಾಣಿಯ ವಾಸದಲ್ಲಿ ದೇವರ ಪೂಜೆಗೆ ಪೂಜಾಗೃಹವಿದೆ. ಹಿಂದೂ ಶಿಲ್ಪಕಲೆಯೂ ಸ್ವಲ್ಪ ಇದೆ. ಅಂಗೂರಿ ಬಾಗ್ ಮುಂದೆ ದೊಡ್ಡ ತೋಟವಿತ್ತಂತೆ. ಒಳಗಡೆ ಚಿನ್ನ ಬೆಳ್ಳಿಯ ಬಣ್ಣ ಹಾಕಿದ್ದರಂತೆ. ಸುತ್ತಲೂ ನೀರಿನ ನಾಲೆಗಳು, ಬುಗ್ಗೆಗಳು ಇದ್ದುವಂತೆ. ಅವು ಈಗ ಇಲ್ಲ. ಕೋಟೆಯ ಒಳಗಡೆಯೇ ದಂತ, ಅಮೃತಶಿಲೆ, ಹಿತ್ತಾಳಿಯಲ್ಲಿ ಮಾಡಿದ ಕೆತ್ತನೆ ಸಾಮಾನುಗಳ ಮಾರಾಟದ ಅಂಗಡಿಗಳಿವೆ.

ಎಷ್ಟೇ ಅವಸರದಿಂದ ನೋಡಿದರೂ ಏಳು ಗಂಟೆ ಆಯಿತು. ಇಲ್ಲಿಂದ ನೇರವಾಗಿ ತಾಜಮಹಲ್ ಬಳಿ ಹೋದೆವು. ಕೋಟೆಯಿಂದ ೩-೪ ಮೈಲಿ ಆಗುತ್ತೆ. ಕೋಟೆಯ ಎದುರಿನಲ್ಲೆ ಈಸ್ಟ್ ಇಂಡಿಯಾ ರೈಲ್ವೆಯ ಆಗ್ರಾ ಕೋಟೆ ಸ್ಟೇಷನ್ ಇದೆ. ತಾಜಮಹಲ್ ಬಳಿ ಒಂದು ದೊಡ್ಡ ಊರೇ ಇದೆ. ನಾವು ಹೋಗುವ ಹೊತ್ತಿಗೆ ಚಂದ್ರೋದಯವಾಗಿತ್ತು. ಹುಣ್ಣಿಮೆಯ ಹಾಲು ಚೆಲ್ಲಿದ ಬೆಳದಿಂಗಳಲ್ಲಿ ಸಂಪೂರ್ಣ ಹಾಲುಗಲ್ಲಿನಲ್ಲೇ ಕಟ್ಟಿರುವ ತಾಜಮಹಲನ್ನು ನೋಡಲು ಬಹು ಸೊಗಸಾಗಿರುತ್ತದೆ. ಹುಣ್ಣಿಮೆಯ ರಾತ್ರಿ ತಾಜಮಹಲ್ ನೋಡಲು ಜನರು ದೊಡ್ಡ ಯಾತ್ರೆಗೆ ಬಂದಂತೆ ಬರುತ್ತಾರೆ. ನಾವು ಹೋದ ದಿನ ಗವರ್ನರ್ ಜನರಲ್ ದಂಪತಿಗಳೂ ಅವರ ಮಗಳು ಪೆಮಿಲಾ ಮೌಂಟ್ ಬ್ಯಾಟನ್ ಬಂದಿದ್ದರು. ಅವರು ಬಂದಾಗ ನಮ್ಮಂತೆ ಇನ್ನೂ ಅನೇಕರು ನೋಡಲು ಬಂದಿದ್ದರು. ಗವರ್ನರ್ ಜನರಲ್ ದಂಪತಿಗಳ ಭೇಟಿ ಎಂದು ಯಾರನ್ನೂ ತಡೆಯಲಿಲ್ಲ. ಭಾರತವಿಂದು ಸ್ವತಂತ್ರವಾಗಿದೆ—ಲಾರ್ಡ್ ಮೌಂಟ್ ಬ್ಯಾಟನ್ ಸ್ವತಂತ್ರ ಭಾರತದ ಗವರ್ನರ್

ಜನರಲ್. ತಾಜಮಹಲ್ ಎದುರು ದೊಡ್ಡ ಹೆಬ್ಬಾಗಿಲು—ಸುಮಾರು ೧೦೦ ಅಡಿ ಎತ್ತರವಿದೆ. ಮೂರು ಮಹಡಿಗಳಿವೆ. ಮೆಟ್ಟಲು ಇಳಿಯುತ್ತಲೆ ಎದುರಿಗೆ ಸುಮಾರು ಎರಡು ಫರ್ಲಾಂಗ್ ದೂರದಲ್ಲಿ ತಾಜಮಹಲ್. ಮಧ್ಯೆ ನೀರಿನ ಬುಗ್ಗೆಗಳು. ನೀರಿನ ಬುಗ್ಗೆಗಳ ಎರಡು ಪಕ್ಕದಲ್ಲೂ ತಾಜಮಹಲ್ ಬಳಿ ಹೋಗಲು ದಾರಿ. ದಾರಿಯ ಮಧ್ಯೆ ಒಂದು ಎತ್ತರವಾದ ಬಿಳಿ ಕಲ್ಲಿನ ಗದ್ದುಗೆ ಇದೆ. ಅದರ ಮಧ್ಯೆ ಒಂದು ಕೊಳ. ಕೊಳದ ಸುತ್ತಲೂ ಸುಖಾಸನಗಳು. ತಾಜಮಹಲ್ ಎತ್ತರವಾದ ಕಟ್ಟೆಯ ಮೇಲೆ ಇದೆ. ಸುಮಾರು ೧೫ ಅಡಿ ಎತ್ತರ ವಿರಬಹುದು. ಈ ಕಟ್ಟೆಯ ಎರಡು ಪಕ್ಕದಲ್ಲೂ ಎರಡು ಭವ್ಯವಾದ ಕೆಂಪು ಸಾಣೆಕಲ್ಲಿನಲ್ಲಿ ಕಟ್ಟಿದ ಗೋರಿಗಳ ಭವನಗಳಿವೆ. ಕಟ್ಟೆಯನ್ನೇರಿ ದರೆ ಬಿಳುಪು ಕಪ್ಪು ಚದುರಗಲ್ಲಿನ ಭವ್ಯವಾದ ಅಂಗಳ. ನಾಲ್ಕು ಮೂಲೆಗಳಲ್ಲೂ ಗಗನವನ್ನು ಚುಂಬಿಸುವ ಗೋಪುರಗಳು. ಮಧ್ಯೆ ಅಮೃತಶಿಲೆಯಲ್ಲಿ ಕಟ್ಟಿದ ತಾಜಮಹಲ್ ! ಹಿಂದೆಯೇ ಮಂದಗಮನೆ ಯಾಗಿ—ಹೋಗಲಾರದೆ ಹೋಗುವಂತೆ ಹರಿಯುವ ಯಮುನೆ— ತಾಜಮಹಲ್ ಒಳಗೆ ಇಳಿದು ಸುಮಾರು ೨೦ ಗಜ ಒಳಗೆ ಹೋದರೆ ಅಲ್ಲಿ ಷಾಜಹಾನನ ಮತ್ತು ಮುಮತಾಜಳ ಗೋರಿಗಳು. ಒಂದರ ಪಕ್ಕದಲ್ಲಿ ಒಂದಿವೆ. ಸುತ್ತಲೂ ಅಮೃತಶಿಲೆಯ ಕಟಕಟೆ. ಒಳಗಡೆ ಇತ್ಮದ್ದೌಲದಲ್ಲಿ ಕಂಡ ಅದೇ ಕಲ್ಲಿನ ಕುಸುರಿ ಕೆಲಸ. ಸುನೇರಿ ಬಣ್ಣದ ಕಲ್ಲನ್ನು ಜೋಡಿಸಿ ಮಾಡಿರುವುದನ್ನು ನೋಡಿದರೆ ಚಿನ್ನದಲ್ಲೇ ಹೂವನ್ನು ಬಿಡಿಸಿ ಜೋಡಿಸಿದ್ದಾರೇನೋ ಎಂಬಂತೆ ಈಗಲೂ ವಿಸ್ಮಯವನ್ನುಂಟುಮಾಡುತ್ತದೆ. ಎಲ್ಲ ಜೋಡಣೆಯ ಕೆಲಸವನ್ನೂ ಕಲ್ಲಿನಲ್ಲೇ ಮಾಡಿದ್ದರೂ ಬಣ್ಣದಲ್ಲಿ ಈಗತಾನೆ ಚಿತ್ರ ಬರೆದಂತಿದೆ. ಹಳೇಬೀಡು ಬೇಲೂರಿನ ಕಲಾಕೃತಿಯನ್ನೂ ನೋಡಿದ್ದೇನೆ. ಅದರ ಸೊಬಗೇ ಬೇರೆ—ಇದರ ಸೊಬಗೇ ಬೇರೆ. ಅದು ಒಂದೇ ಶಿಲೆಯಲ್ಲಿ ಮಾಡಿದ ನಯ ಕೆಲಸ. ಅಲ್ಲಿನಂತೆ ಇಲ್ಲಿ ದೈವತ್ವದ ಕಲ್ಪನೆ ಇಲ್ಲ— ಪುರಾಣ ಪುಣ್ಯಕಥೆಗಳ ಹಿನ್ನೆಲೆ ಇಲ್ಲ. ದೇವಾನುದೇವತೆಗಳ

ವಿಗ್ರಹಗಳಿಲ್ಲ. ಒಬ್ಬ ಚಕ್ರವರ್ತಿ ತನ್ನ ರಾಣಿಯ ನೆನಪಿಗಾಗಿ ಕಟ್ಟಿಸಿದ ಒಂದು ಕಲಾಕೃತಿ. ಬಿಳಿಯ ಕಲ್ಲಿನ, ಬಣ್ಣ ಬಣ್ಣದ ಕಲ್ಲುಗಳ ಜೋಡಣೆಯಿಂದ ಹೂವು, ಬಳ್ಳಿಗಳನ್ನು ಬಿಡಿಸಿ ಪ್ರಪಂಚಕ್ಕೇ ಒಂದು ಅಚ್ಚರಿಯನ್ನುಂಟು ಮಾಡಿದ್ದಾರೆ. ಕಟ್ಟಲು ಏಳು ಕೋಟಿ ರೂಪಾಯಿ ಹಿಡಿಯಿತಂತೆ. ಸುತ್ತಲೂ ರಮಣೀಯವಾದ ಯಮುನಾ ತೀರದ ಹೂತೋಟ. ಪೌರ್ಣಿಮೆಯ ದಿವಸ ಪೂರ್ಣ ಚಂದ್ರನು ಮೇಲೇರಿದಂತೆ ತಾಜಮಹಲಿನ ಶುಭ್ರಕಾಂತಿಯೂ ಇಮ್ಮಡಿಸುತ್ತದೆ. ಬೇರೆ ಬೇರೆ ಮೂಲೆಯಿಂದ, ಬೇರೆ ಬೇರೆ ಸೊಬಗನ್ನು ಸೂಸುತ್ತದೆ. ಎದುರಿನ ಕೊಳದ ಪ್ರತಿಬಿಂಬದ ನೋಟವೂ ಒಂದು ಸೊಗಸು —ನೋಡಿದಷ್ಟು ಇನ್ನೂ ನೋಡೋಣವೆನಿಸುತ್ತದೆ. ಒಂದು ಬಾರಿ ಹೊರಗೆ ಹೋಗಿ ಪುನಃ ಬಂದು, ಪುನಃ ಹೊರಟಾಗ ಹತ್ತು ಗಂಟೆ. ಹೊರಗೆ ಅಂಗಡಿಗಳು. ಅದೇ ಬಿಳಿ ಕಲ್ಲಿನ ತಾಜಮಹಲ್! ಆ ಶಿಲ್ಪಕಲೆ ಇನ್ನೂ ಜೀವಂತ ಇದೆ. ಅನೇಕ ಕಲಾಕುಶಲರಿಗೆ ಅದೇ ಜೀವನ ಮಾರ್ಗ. ಆ ಬಿಳಿಯ ಕಲ್ಲು ಜಬ್ಬಲ್‌ಪುರದ ಬಳಿ ತಾಪ್ತಿ ನದಿಯ ಕಣಿವೆಯಲ್ಲಿ ದೊರೆಯುತ್ತದೆ. ತಿರುಗಾಡಿ ಕಾಲುಗಳು ದಣಿದಿದ್ದವು— ಹೊಟ್ಟೆಯು ಹಸಿದಿತ್ತು. ಅಲ್ಲಿಯೇ ಒಂದು ಅಂಗಡಿಯಲ್ಲಿ ಚಹ ಕುಡಿದು ಹೊರಟೆವು. ಸಿವಿಲ್ ಲೈನ್ಸ್ ಬಳಿ ಬಂದಾಗ ಯಾರೋ ವಿದ್ಯಾರ್ಥಿಯನ್ನು ಕೇಳಿ, ಶ್ರೀ ಅನಂತರಾಯರ ಮನೆ ಹುಡುಕಿ, ಸಾಮಾನಿನ ಕಮಿಶ್ಶರ್ ಪೂರೈಸಿದೆ. ಪಾಪ ಮಲಗಿದ್ದವರನ್ನು ಎಬ್ಬಿಸಿದೆವು. ನನ್ನ ಟೆಲಿಗ್ರಾಂ ಮಧ್ಯಾಹ್ನ ೪ ಗಂಟೆಗೆ ತಲ್ಪಿತಂತೆ. ಸ್ಟೇಶನ್ ಬಳಿ ಹೋಟೆಲಿಗೆ ಹೋಗಿ ವಿಚಾರಿಸಿದಾಗ ನಾವು ಬಂದು ತಿರುಗಾಡಲು ಹೊರಟ ವಿಷಯ ತಿಳಿಯಿತಂತೆ. ಮಲಗಿದ್ದ ವಿಜು ಬಂದು ರಾಜೂನ್ನ ವಿಚಾರಿಸಿದ. ಆ ವೇಳೆಯಲ್ಲಿ ತೊಂದರೆ ಕೊಡ ಬಾರದೆಂದು ಹಾಗೇ ಹೊರಟು ಹೋಟೆಲಿಗೆ ಬಂದರೆ ಅಲ್ಲಿ ಎಲ್ಲ ಖಾಲಿ! ಕೊನೆಗೆ ನಾನೂ ಇನ್ನೊಬ್ಬರೂ ಅಡಿಗೆ ಮಾಡಿಸಿಯೇ ಊಟ ಮಾಡಿದೆವು. ಹೊಟ್ಟೆ ತಾಳ ಹಾಕುತ್ತಿತ್ತು. ಶ್ರೀನಿವಾಸರಾಯರೂ

ಅವರ ಮಿತ್ರರೂ ಹಸಿವಿನಲ್ಲಿ ಸ್ವಲ್ಪ ತಿಂಡಿ ತಿಂದು, ಹಾಲು ಕುಡಿದು ಬರುತ್ತೇವೆ, ದುಡ್ಡು ಉಳಿಸೋಣ ಎಂದು ಹೋದವರು ಊಟಕ್ಕಿಂತ ಹೆಚ್ಚು ತಿಂಡಿಗೇ ಖರ್ಚು ಮಾಡಿದರು. ರಾತ್ರಿಯೇ ೧೨ ಗಂಟೆ ರೈಲಿನಲ್ಲಿ ಹೊರಡೋಣವೆಂದರು. ನಾನು ನಿದ್ರೆ ಕೆಡುವುದಿಲ್ಲ— ಬೆಳಿಗ್ಗೆ ೭ ಗಂಟೆಗೆ ಗ್ರ್ಯಾಂಡ್ ಟ್ರಂಕ್ ಎಕ್ಸ್‌ಪ್ರೆಸ್‌ನಲ್ಲಿ ಹೋಗೋಣ ಎಂದು ಮಲಗೇ ಬಿಟ್ಟೆ. ಅವರೂ ನಿರ್ವಾಹವಿಲ್ಲದೆ ಮಲಗಿದರು. ಬೆಳಿಗ್ಗೆ ಎದ್ದು ರೈಲಿಗೆ ಹೊರಡಿ ಎಂದರೆ, ಹಗಲು ತಾಜಮಹಲ್ ನೋಡಿ ಬರುತ್ತೇನೆ ಎಂದು ರಾಯರು ನಿಂತೇ ಬಿಟ್ಟರು! ೭ ಗಂಟೆಗೆ ಬರಬೇಕಾದ ಗಾಡಿ ೧೧ ಗಂಟೆಗೆ ಆಗ್ರಾಕ್ಕೆ ಬಂದಿತು. ಈ ಮಧ್ಯೆ ನಾನೂ ಒಂದು ತಾಜಮಹಲ್ ವ್ಯಾಪಾರ ಮಾಡಿದೆ. ದೆಹಲಿ ತಲ್ಪಿದಾಗ ೩ ಗಂಟೆ. ಆಗ್ರಾದಲ್ಲಿ ೩-೪ ಕಾಲೇಜುಗಳಿವೆ. ಆಗ್ರಾ ವಿಶ್ವವಿದ್ಯಾನಿಲಯವೂ ಬಹು ದೊಡ್ಡದು. ಇದಲ್ಲದೆ ಆಗ್ರಾವಲ್ಲಿ ದಯಾಲ್‌ಬಾಗ್ ಎಂಬ ಉದ್ಯೋಗ ಕೇಂದ್ರವಿದೆ. ದಯಾಲ್‌ಬಾಗ್ ಚಾಕು, ಕತ್ತರಿ, ಚಪ್ಪಲಿ, ಡ್ರೈರಿಫಾರಂ ತುಂಬ ಪ್ರಸಿದ್ಧಿ. ಅದನ್ನು ನೋಡಲು ನನಗೆ ಸಾಧ್ಯವಾಗಲಿಲ್ಲ. ಇನ್ನೊಂದು ಬಾರಿ ಹೋಗಬೇಕು. ಹತ್ತಿರವೇ ಫತ್ತೆಪುರಸಿಕ್ರಿ ಇದೆ. ಅದನ್ನೂ ನೋಡಲು ಸಾಧ್ಯ ವಾಗಲಿಲ್ಲ. ದೆಹಲಿಯಿಂದ ಆಗ್ರಾವರೆಗೂ ಯಮುನಾ ನದಿಯ ಕಾಲುವೆ ಇದೆ. ಈ ಕಾಲುವೆಯಲ್ಲಿ ಹಿಂದಕ್ಕೆ ಸಾಮಾನುಗಳನ್ನು ಸಾಗಿಸುತ್ತಿದ್ದರಂತೆ. ದೆಹಲಿಯಂತೆ ಆಗ್ರಾ ನಗರವೂ ಆಗ ಮೊಗಲ್ ಚಕ್ರವರ್ತಿಗಳ ರಾಜಧಾನಿಯಾಗಿತ್ತು. ಆಗ್ರಾದಲ್ಲಿ ಸಿವಿಲ್ ಲೈನ್ಸ್ ಚೊಕ್ಕಟವಾಗಿದೆ. ಹಳೆಯ ನಗರದ ರಸ್ತೆಗಳು ಬಹಳ ಇಕ್ಕಟ್ಟು— ಕೆಲವು ಕಡೆ ರಸ್ತೆಗೆ ಕಲ್ಲು ಹಾಸಿದ್ದಾರೆ. ಆಗಲೇ ನಿರಾಶ್ರಿತರ ಸಮಸ್ಯೆ ಆರಂಭವಾಗಿದೆ. ನಿರಾಶ್ರಿತರಲ್ಲಿ ಒಳ್ಳೆಯವರೂ ಇದ್ದಾರೆ—ಕೆಟ್ಟವರೂ ಇದ್ದಾರೆ. ಆಗ್ರಾ ಮಿಠಾಯಿಗೆ ಬಹಳ ಪ್ರಸಿದ್ಧಿ. ಇಬ್ಬರು ನಿರಾಶ್ರಿತರು ಮಿಠಾಯಿಗೆ ಹೋದರಂತೆ. ಒಬ್ಬ ಮಿಠಾಯಿ ತೆಗೆದು ಕೊಂಡು, ನೂರು ರೂಪಾಯಿ ನೋಟು ಕೊಟ್ಟು ಚಿಲ್ಲರೆ ಒಯ್ದು.

ಅವನ ಹಿಂದೆಯೇ ಅವನ ಸ್ನೇಹಿತ ಬಂದು ಮಿಠಾಯಿ ತೆಗೆದುಕೊಂಡು ದುಡ್ಡು ಕೇಳಿದರೆ ಅಂಗಡಿಯವನಿಗೇ ಚಿಲ್ಲರೆ ಕೊಡು ಎಂದು ಗಲಾಟೆ ಎಬ್ಬಿಸಿ 'ನೋಟು ತೆಗೆದುಕೊಂಡು ಚಿಲ್ಲರೆ ಕೊಡುವುದಿಲ್ಲ ಎನ್ನುತ್ತಾನೆ' ಎಂದು ಅಂಗಡಿಯವನ ಮೇಲೆಯೇ ದೂರು ಮಾಡಿದನಂತೆ. ಹಿಂದೂ ಮುಸ್ಲಿಂ ಗಲಾಟೆ ನಿಮಿತ್ತ ಹಿಂದೂಗಳ ಮತ್ತು ಮುಸ್ಲಿಂರ ಹೃದಯ ಪರಿವರ್ತನೆಯಾಗಿ ದೇಶದಲ್ಲಿ ಶಾಂತಿ ನೆಲಸಲೆಂದು ಮಹಾತ್ಮಾಜಿಯವರು ಉಪವಾಸವ್ರತ ಕೈಗೊಂಡಿದ್ದಾರೆ. ಇವತ್ತು ೧೧ ಗಂಟೆಗೆ ಮೂರು ದಿನಗಳಾದವು. ಇದುವರೆಗೆ ಸುಖವಾಗಿದ್ದಾರೆಂದು ಪತ್ರಿಕೆಗಳಲ್ಲಿ ವರದಿಯಾಗಿದೆ. ಇಲ್ಲಿ ಯಾರ ಬಾಯಲ್ಲಿ ನೋಡಿದರೂ ಅದೇ ಮಾತು. ಪರಿಣಾಮ ಏನಾಗುತ್ತೋ—ದೇವರ ಕೈಲಿದೆ. ಈ ದಿನ ನಮ್ಮ ಕಮಿಟಿ ಮೀಟಿಂಗ್ ಆರಂಭವಾಯಿತು. ೩-೪ ದಿನ ನಡೆಯುತ್ತೆ. ಆಮೇಲೆ ಒಂದು ವಾರ ಬಿಡುವಿದೆ.

೨೫-೧-೪೮

ನಮ್ಮ ಮೀಟಿಂಗ್ ೧೯ನೇ ತಾರೀಖು ಮುಗಿಯಿತು ಎಂದು ಬರೆದಿದ್ದೆ. ಆಮೇಲೆ ಕಾಲ ಕಳೆಯುವುದು ಹೇಗೆಂದು ಯೋಚಿಸುತ್ತ ಲಿದ್ದೆ. ಅದೇ ಸಮಯಕ್ಕೆ ಮೈಸೂರಿನ ಶಿಕ್ಷಣ ಮಂತ್ರಿಗಳು ಶ್ರೀ ಚಂದ್ರಶೇಖರಯ್ಯನವರು ಬಂದಿದ್ದರು. ಅವರ ಜತೆಯಲ್ಲಿ ಇಲ್ಲಿನ ಕೆಲವು ವಿದ್ಯಾಮಂದಿರಗಳನ್ನು ನೋಡಿದೆ.

ಮೊದಲನೆಯದಾಗಿ ಲೇಡಿ ಇರ್ವಿನ್ ಕಾಲೇಜ್. ಇದನ್ನು ಅಖಿಲ ಭಾರತದ ಮಹಿಳಾ ಸಮ್ಮೇಳನದವರು ನಡೆಸುತ್ತಾರೆ. ಅಲ್ಲಿ ಹುಡುಗಿಯರಿಗೆ ಗೃಹಕೈಗಾರಿಕೆ, ಅಡಿಗೆ ಮಾಡುವುದು, ಕಸೂತಿ ಕೆಲಸ, ಹೊಲಿಗೆ ಮುಂತಾದ ವಿಷಯ ಹೇಳಿಕೊಡುತ್ತಾರೆ. ೪೦೦ ಜನ ಹುಡುಗಿಯರಿದ್ದಾರೆ. ತಿಂಗಳಿಗೆ ೨೦ ರೂ. ಫೀಜು; ಹಾಸ್ಟಲ್ ಫೀಜು ತಿಂಗಳಿಗೆ ೪೦ ರೂ. ವಾರಕ್ಕೆ ೬೦ ರೂ. ಕೊಟ್ಟು ಸ್ವತಃ ಮನೆಯನ್ನು ಹೇಗೆ ನಡೆಸಬೇಕು ಎಂಬುದನ್ನು ಹೇಳಿಕೊಡುತ್ತಾರೆ. ೪-೬ ಜನ ಹುಡುಗರು ಒಂದು ಮನೆಯಲ್ಲಿದ್ದು, ಒಂದೊಂದು ವಾರ

ಅವರವರ ಕೆಲಸ ಮಾಡಿಕೊಂಡು, ಅವರೇ ಗೃಹಕೃತ್ಯ ನಡೆಸಬೇಕು. ಹುಡುಗರೇ ಮಾಡಿದ ಕಸೂತಿ ಕೆಲಸ, ಚಿತ್ರದ ಕೆಲಸ, ಹದಿನೈದು ದಿನಕ್ಕೊಮ್ಮೆ ಹೊರಡಿಸುವ ಕೈಬರೆಹದ ಪತ್ರಿಕೆ—ಎಲ್ಲ ಚೆನ್ನಾಗಿತ್ತು. ಆದರೆ ಇದೆಲ್ಲ ಶ್ರೀಮಂತರ ಮಕ್ಕಳಿಗೆ. ವರ್ಷಕ್ಕೆ ೬೦ ರೂ. ಸಂಪಾದನೆ ಇರುವ ಬಡ ಭಾರತೀಯರಿಗೆ ಸಾಧ್ಯವಿಲ್ಲದ ಮಾತು. ಪ್ರಿನ್ಸಿಪಾಲ್ ನಮ್ಮನ್ನು ಆದರದಿಂದ ಬರಮಾಡಿಕೊಂಡು ಎಲ್ಲವನ್ನೂ ತೋರಿಸಿದರು.

ಅಂದೇ ಮಧ್ಯಾಹ್ನ ಇಲ್ಲಿಗೆ ಏಳು ಮೈಲಿ ದೂರದಲ್ಲಿ ಓಕ್ಲ ಎಂಬ ಸ್ಥಳದಲ್ಲಿ 'ಜಮಿಯ ಮಿಲಿಯ' ಎಂಬ ವಿದ್ಯಾಲಯವಿದೆ. ಅದರ ವ್ಯವಸ್ಥಾಪಕರು ಡಾಕ್ಟರ್ ಜಕೀರ್ ಹುಸೇನ್ ಎಂಬುವವರು—ಬಹಳ ದೊಡ್ಡ ವಿದ್ವಾಂಸರು. ಜರ್ಮನಿಯಲ್ಲಿದ್ದು ಪಿ.ಎಚ್.ಡಿ. ಡಿಗ್ರಿ ಪಡೆದವರು. ಅವರು ಒಂದು ಹೊಸ ಪ್ರಯೋಗವನ್ನೇ ನಡೆಸಿದ್ದಾರೆ. ಗಾಂಧಿಯವರು ಮೂಲ ಶಿಕ್ಷಣವನ್ನು ಪ್ರಾಥಮಿಕ ತರಗತಿಯಿಂದ ಹಿಡಿದು ಕಾಲೇಜುವರೆಗೆ ಕಾರ್ಯಗತಮಾಡಿ ತೋರಿಸಿದ್ದಾರೆ. ಪ್ರಾಥಮಿಕ ಶಾಲೆಯ ಕಟ್ಟಡಗಳನ್ನು ಹಳ್ಳಿಯಲ್ಲೇ ಸಿಗುವ ಮಣ್ಣು, ಗಳು, ಮರದ ಸಾಮಾನುಗಳಿಂದ ಹಳ್ಳಿಯವರೇ ಕಟ್ಟಿದ್ದು. ಕಿಟಕಿಯ ಸರಳುಗಳು ಸಹ ಗಳುವಿನ ತುಂಡುಗಳು. ಆದರೂ ಬಹಳ ಚೊಕ್ಕಟ ವಾಗಿತ್ತು. ಪ್ರತಿಯೊಬ್ಬ ಹುಡುಗನಿಗೂ ತೋಟ ಮಾಡಲು ಒಂದು ಸಣ್ಣ ಪಾತಿ. ಅದರಲ್ಲಿ ಅವರು ಹೂ, ತರಕಾರಿ, ಸೊಪ್ಪು—ಏನು ಬೇಕಾದರೂ ಬೆಳೆಯಬಹುದು. ಪ್ರತಿಯೊಬ್ಬ ಹುಡುಗನಿಗೂ ನೂಲುವುದಕ್ಕೆ ತಕಲಿ. ಅಲ್ಲಿಯೇ ಕಾಗದ ತಯಾರು ಮಾಡುತ್ತಾರೆ—ಹರಕು ಬಟ್ಟೆ, ಕಾಗದದ ತುಂಡುಗಳಿಂದ ತಯಾರು ಮಾಡುತ್ತಾರೆ. ಬಿಳಿ ಕಾಗದಕ್ಕೆ ನಮುನಮೂನೆ ಬಣ್ಣಗಳನ್ನು ಹಾಕಿ, ಆ ಬಣ್ಣದ ಕಾಗದಗಳಿಂದ ಆಟದ ಸಾಮಾನು ಮಾಡುತ್ತಾರೆ. ಮರದ ಸಾಮಾನುಗಳ 'ಮಾಡೆಲ್' (model) ಆಕೃತಿಗಳನ್ನೂ ಮಾಡುತ್ತಾರೆ. ಈ ಆಕೃತಿಗಳನ್ನು ನೋಡಿ ಮರದ ಸಾಮಾನು ಮಾಡುತ್ತಾರೆ. ಅವರು

ಮಾಡಿದ ಕಾಗದದಲ್ಲೇ ಪಠ್ಯ ಪುಸ್ತಕಗಳನ್ನು ಮಾಡಿದ್ದಾರೆ. ಬೇರೆ ಪುಸ್ತಕಗಳನ್ನು ಉಪಯೋಗಿಸುವುದಿಲ್ಲ. ಇಂಥ ಪುಸ್ತಕಗಳನ್ನೆಲ್ಲ ಪ್ರದರ್ಶನಶಾಲೆಯಲ್ಲಿ ನೋಡಿದೆವು. ಕನ್ನಡ ನಾಡಿನಿಂದ ಕಲಿಯಲು ಬಂದಿದ್ದ ಕೆಲವು ವಿದ್ಯಾರ್ಥಿಗಳು ಕನ್ನಡದಲ್ಲಿ ಬರೆದಿದ್ದ ಪುಸ್ತಕಗಳನ್ನು ನೋಡಿದೆವು. ಉಪಾಧ್ಯಾಯರಿಗೆ ತರಪೇತು ಕೊಡಲು ಟ್ರೇನಿಂಗ್ ಕಾಲೇಜು ಇದೆ. ಹೈಸ್ಕೂಲ್ ಕಾಲೇಜಿನಲ್ಲಿ—ಹಲ್ಲುಪುಡಿ, ಹಣ್ಣಿನ ರಸಾಯನ, ಮಸಿಯನ್ನು ಮಾಡುವುದು, ವ್ಯಾಸಲೀನ್ ತಯಾರಿಕೆ ಮುಂತಾದುವನ್ನೆಲ್ಲ ಹೇಳಿಕೊಡುತ್ತಾರೆ. ಇವರು ಅಂದರೆ—ಹುಡುಗರೇ ಮಾಡಿರುವ ಮ್ಯೂಸಿಯಂ ಬಹಳ ಚನ್ನಾಗಿದೆ. ಹುಡುಗರೇ ಒಂದು ಬ್ಯಾಂಕ್, ಕೋ-ಆಪರೇಟಿವ್ ಸೊಸೈಟಿ ನಡೆಸುತ್ತಾ ಇದ್ದಾರೆ. ಪ್ರತಿಯೊಂದಕ್ಕೂ ಲೆಕ್ಕವನ್ನು ಹುಡುಗರೇ ಇಟ್ಟಿದ್ದಾರೆ. ಪ್ರತಿಯೊಬ್ಬ ಹುಡುಗನಿಗೂ ಒಂದು ಪ್ಯಾಸ್ ಬುಕ್, ಒಂದು ಚೆಕ್ ಬುಕ್ ಕೊಡುತ್ತಾರೆ. ಸ್ಕೂಲ್—ಕಾಲೇಜನ್ನು ಅಲಂಕರಿಸುವುದು ಹುಡುಗರೇ ಬರೆದ ಚಿತ್ರಗಳಿಂದ. ಮೊದಲು ಸಣ್ಣ ಗುಡಿಸಲಿನಲ್ಲಿ ಆರಂಭವಾದ ಪಾಠಶಾಲೆ ೨೫ ವರ್ಷಗಳ ಸತತ ಪ್ರಯತ್ನ ಮತ್ತು ಶ್ರಮದಿಂದ ಇಂದು ಭಾರತಕ್ಕೇನೆ ಆದರ್ಶವಾದ ಒಂದು ವಿಶ್ವವಿದ್ಯಾನಿಲಯವಾಗಿ ದೊಡ್ಡ ಸಂಸ್ಥೆಯಾಗಿದೆ. ವಿದ್ಯಾಭ್ಯಾಸವೆಲ್ಲ ನಡೆಯುವುದು ಉರ್ದುವಿನಲ್ಲಿ. ಡಾಕ್ಟರ್ ಜಕೀರ್ ಹುಸೇನ್ ಮುಸಲ್ಮಾನರಾದರೂ ಗಾಂಧೀಜಿಯವರ ಶಿಷ್ಯರು. ಈಗ ಏನಿಲ್ಲೆಂದರೂ ೫೦-೬೦ ಲಕ್ಷ ರೂಪಾಯಿನ ಆಸ್ತಿ—ಕಾಲೇಜು ಸ್ಕೂಲು ಎಲ್ಲ ಸೇರಿದರೆ—ಇರಬಹುದು. ಅಲ್ಲಿ ನಾವು ಕಳೆದ ೨-೩ ಗಂಟೆಗಳು ನಮಗೇನೆ ಒಂದು ಹೊಸ ಬೆಳಕನ್ನು ಕೊಟ್ಟಿತು. ದೃಢವಿಶ್ವಾಸ ಮತ್ತು ಆತ್ಮಶ್ರದ್ಧೆ ಇದ್ದರೆ ದೊಡ್ಡ ಕೆಲಸ ಮಾಡ ಬಹುದೆಂಬುದು ವ್ಯಕ್ತವಾಯಿತು. ಲೇಡಿ ಇರ್ವಿನ್ ಕಾಲೇಜ್ ಒಂದು ಕೃತಕ ಆಟದ ಬೊಂಬೆಯಾದರೆ—ಇದು ಒಂದು ಸಜೀವ ವಸ್ತು. ಅಲ್ಲಿನ ಅಧ್ಯಾಪಕರು ತೆಗೆದುಕೊಳ್ಳುವ ಸಂಬಳ ಮೊದಲು ೭೫ ರೂ. ಮಾತ್ರ ಇತ್ತು. ಈಗ ಯುದ್ಧದ ದೆಸೆಯಿಂದ ೧೨೫-೧೩೦ ಮಾಡಿದ್ದಾರೆ.

ಒಂದು ದೊಡ್ಡ ಪುಸ್ತಕ ಭಂಡಾರವಿದೆ. ಅದರ ಕೆಲವು ಭಾಗ ದೆಹಲಿಯಲ್ಲೆ ಇತ್ತಂತೆ. ಮೊನ್ನೆ ನಡೆದ ಹಿಂದೂ ಮುಸ್ಲಿಂ ಗಲಾಟೆಯಲ್ಲಿ ಅದಕ್ಕೂ ಬೆಂಕಿ ಇಡಲು ಪ್ರಯತ್ನ ನಡೆಯಿತಂತೆ. ದೇವರ ಕೃಪೆ ಯಿಂದ ಅದು ಉಳಿಯಿತು. ನಾವು ಹೋದಾಗ ಇನ್ನೂ ಹಾಗೆಯೇ ಅಲ್ಲಿಯೇ ರಾಶಿ ಹಾಕಿದ್ದರು. ಡಾಕ್ಟರ್ ಜಕೀರ್ ಹುಸೇನರವರೇ ನಮ್ಮನ್ನು ಸ್ವತಃ ಕರೆದುಕೊಂಡು ಹೋಗಿ ಎಲ್ಲವನ್ನೂ ತೋರಿಸಿದರು— ತುಂಬ ನಿಗರ್ವಿಗಳು.

ಮಾರನೆ ದಿನ ಬೆಳಿಗ್ಗೆ ಕೆಂಪು ಕೋಟೆಗೆ ಹೋಗಿದ್ದೆವು. ಇದು ಮೊಗಲ್ ಚಕ್ರವರ್ತಿಗಳು ಇದ್ದ ಅರಮನೆ. ಇಲ್ಲಿಯೇ ದಿವಾನಿ ಆಮ್ (ಪ್ರಜೆಗಳು ಚಕ್ರವರ್ತಿಯ ಎದುರು ಅಹವಾಲು ಹೇಳಿ ಕೊಳ್ಳುವ ದರ್ಬಾರ್ ಹಾಲ್), ದಿವಾನಿ ಆಮ್ (ಶ್ರೀಮಂತರ ದರ್ಬಾರು) ಇವೆ. ಮೊಗಲ್ ಚಕ್ರವರ್ತಿಗಳ ಅರಮನೆ—ಷಹಜಹಾನ್ ಕೂಡುತ್ತಿದ್ದ ಸ್ಥಳ—ರಾಣಿವಾಸದ ಮನೆ—ಮಲಗುವ ಮನೆ—ಸ್ನಾನದ ಮನೆಗಳು ಇವೆ. ಈ ಕೋಟೆ ಯಮುನಾ ನದಿಯ ದಡದಲ್ಲಿದೆ. ಯಮುನಾ ನದಿಯಿಂದ ನೀರು ತಂದು ಕೋಟೆಯ ಒಳಗೆಲ್ಲ ನೀರಿನ ಬುಗ್ಗೆಗಳನ್ನು ಮಾಡಿ ಈ ಅರಮನೆಗೆ—ಅರಮನೆಯ ತೋಟಕ್ಕೆ— ಸ್ನಾನದ ಮನೆಗೆ ಬಿಸಿ ನೀರು, ತಣ್ಣೀರು ಒದಗಿಸುತ್ತಿದ್ದರು. ಒಳಗೆ ಬಣ್ಣ ಬಣ್ಣದ ಕಲ್ಲಿನ ಕುಸುರಿ ಕೆಲಸ. ಮೊಗಲರ ಕಾಲದಲ್ಲಿ ಚಿನ್ನ ಬೆಳ್ಳಿಯ ತಗಡುಗಳಿಂದಲೂ, ರತ್ನಗಳಿಂದಲೂ ಅಲಂಕರಿಸಿದ್ದರಂತೆ— ಈಗ ಅದೆಲ್ಲ ಮಾಯವಾಗಿವೆ. ಚಕ್ರವರ್ತಿಗಳು ನಮಾಜು ಮಾಡುತ್ತಿದ್ದ ಮೋತಿ ಮಸೀದಿ ಇದೆ. ದಿವಾನಿ ಆಮ್ ಸುತ್ತಲೂ ಬೆಳ್ಳಿಯ ಕಟಕಟೆ ಇತ್ತಂತೆ. ಅಲ್ಲಿಯೇ ಕೊಹಿನೂರ್ ಸಿಂಹಾಸನವಿದ್ದ ಪೀಠವಿದೆ. ಕೋಟೆಯ ಒಳಗೆ ಒಂದು ಮ್ಯೂಸಿಯಂ ಇದೆ. ಅದರಲ್ಲಿ ಅವರ ಆಯುಧಗಳು, ಚಿತ್ರಪಟಗಳು, ಆಭರಣಗಳು, ಉಡಿಗೆತೊಡಿಗೆಗಳು —ಸಾಮಾನುಗಳ ಸಂಗ್ರಹಾಲಯವಿದೆ. ಚಿತ್ರಪಟಗಳು ಬಹಳ ಚನ್ನಾಗಿವೆ.

ಮಧ್ಯಾಹ್ನ Poly Technique ಎಂಬ ಉದ್ಯೋಗಶಾಲೆಗೆ ಹೋಗಿದ್ದೆವು. ಅಲ್ಲಿ ಕೆಮಿಕಲ್, ಇಂಜಿನಿಯರಿಂಗ್, ಚಿತ್ರ ಮತ್ತು ಶಿಲ್ಪಕಲೆ, ಕಾಮರ್ಸ್, ಟೆಕ್ಸ್‌ಟೈಲ್, ಮೆಕ್ಯಾನಿಕಲ್ ಎಂಜಿನಿಯರಿಂಗ್ ಶಾಲೆಗಳಿವೆ. ಕಾಮರ್ಸ್ ಶಾಖೆಯ ಮ್ಯೂಸಿಯಂ ಬಹಳ ಚನ್ನಾಗಿದೆ. ನಮ್ಮ ದೇಶದ ಖನಿಜ ಸಂಪತ್ತು, ಧಾನ್ಯ ಸಂಪತ್ತು, ಎಣ್ಣೆಬೀಜಗಳು ಆಹಾರ ಧಾನ್ಯಗಳು, ರೇಷ್ಮೆ, ಹತ್ತಿ, ಮೀನುಗಳು—ಏನೇನು ಕಚ್ಚಾ ಸಾಮಾನು ಸಿಗುತ್ತೋ ಅದೆಲ್ಲವನ್ನೂ ಸಂಗ್ರಹಿಸಿದ್ದಾರೆ. ಬರಿ ಪುಸ್ತಕದಿಂದ ಪಾಠ ಹೇಳದೆ ಸ್ವತಃ ಎಲ್ಲವನ್ನೂ ತೋರಿಸಿ ಪಾಠ ಹೇಳುತ್ತಾರೆ.

ಆ ಮಾರನೆ ದಿನ ಇಲ್ಲಿ 'ಸೆಂಟ್ರಲ್ ಆರ್ಕೈವ್ಸ್' ಎಂದರೆ —ಸರ್ಕಾರದ ಕಾಗದಪತ್ರಗಳನ್ನು ಇಟ್ಟಿರುವ ಶಾಖೆಗೆ ಹೋಗಿದ್ದೆವು. ಅದರ ಡೈರೆಕ್ಟರ್ ಡಾಕ್ಟರ್ ಎಸ್. ಎನ್. ಸೇನ್. ಎಂದು. ಇಂಡಿಯಾ ದೇಶದಲ್ಲಿ ಬಹು ದೊಡ್ಡ ವಿದ್ವಾಂಸರು. ಇಲ್ಲಿರುವ ರೆಕಾರ್ಡಗಳ ಬೀರುಗಳನ್ನು ಒಂದರ ಪಕ್ಕದಲ್ಲಿ ಒಂದು ಇಟ್ಟರೆ ೧೩ ಮೈಲಿ ಉದ್ದವಾಗುತ್ತಂತೆ. ರೆಕಾರ್ಡಗಳನ್ನು ಹುಳು ತಿನ್ನದಂತೆ ಇಡುವ ರೀತಿ, ಮಾಸಿದ ರೆಕಾರ್ಡಗಳನ್ನು ಪುನರುಜ್ಜೀವನಗೊಳಿಸುವ ರೀತಿ, ರೆಕಾರ್ಡ ನಾಶವಾಗದಂತೆ ಫೋಟೊ ಫಿಲ್ಮ್ ತೆಗೆದುಕೊಂಡು ಕಾಪಾಡುವ ವಿಧಾನ—ಯಾವುದಾದರೂ ರೆಕಾರ್ಡನ್ನು ಬದಲಾಯಿಸಲು ಪ್ರಯತ್ನ ಪಟ್ಟರೆ ಅದನ್ನು ಕಂಡುಹಿಡಿಯುವ ರೀತಿ ಮುಂತಾದುವನ್ನು ತೋರಿಸಿದರು. ೩೦೦ ವರ್ಷಗಳ ಹಿಂದಿನ ರಿಕಾರ್ಡ ಬೇಕಾದರೂ ದೊರೆಯುತ್ತದೆ! ಇದೂ ಆಶ್ಚರ್ಯವಾಗಿತ್ತು. ನಾವು ಹೋದಾಗ ರವೀಂದ್ರನಾಥ ಠಾಕೂರರ ಒಂದು ಕೈಬರಹದ ಪ್ರತಿಯ ಫೋಟೊ ಫಿಲ್ಮ್ ತೆಗೆಯುತ್ತಿದ್ದರು.

ಸಂಜೆ ಆಲ್ ಇಂಡಿಯಾ ರೇಡಿಯೊವಿಗೆ ಹೋಗಿದ್ದೆವು. ನಮ್ಮ ಆಲ್ ಇಂಡಿಯಾ ರೇಡಿಯೊ ಪ್ರಪಂಚದಲ್ಲೇ ಅತ್ಯುತ್ತಮವಾದ ರೇಡಿಯೊ ಸ್ಟೇಶನ್‌ಗಳಲ್ಲಿ ಒಂದು!

ಮೊನ್ನೆ ದಿನ ಶ್ರೀ ಹನುಮಂತಯ್ಯ ಮುಂತಾದವರು ಬಂದರು. ನಿಜಲಿಂಗಪ್ಪನವರೂ- ಬಂದಿದ್ದಾರೆ. ಕರ್ನಾಟಕ ಏಕೀಕರಣದ ಸಲುವಾಗಿ ಮಂಗಳೂರಿನಿಂದ ಕೆ. ಆರ್. ಕಾರಂತರು, ಶ್ರೀ ಹೊಸಪೇಟೆ ಅನಂತಾಚಾರ್ಯರು, ಮುಂಬೈ ಮಂತ್ರಿಗಳಾದ ಎಂ. ಪಿ. ಪಾಟೀಲ್, ದಿವಾಕರ್ ಇಲ್ಲಿಯೇ ಇದ್ದಾರೆ. ನಿನ್ನೆ ಬೆಳಿಗ್ಗೆ ಡಾಕ್ಟರ್ ರಾಜೇಂದ್ರ ಪ್ರಸಾದರನ್ನು ನೋಡಿದ್ದೆವು. ನಿನ್ನೆ ಸಂಜೆ ಮಹಾತ್ಮ ಗಾಂಧಿಯವರನ್ನು ಕಂಡಿದ್ದೆವು. ೪೫ ನಿಮಿಷಗಳ ಕಾಲ ಮಾತನಾಡಿದರು. ಮುದುಕ ೫ ದಿನ ಉಪವಾಸ ಮಾಡಿದರೂ ಅಷ್ಟು ಹೊತ್ತು ಮಾತನಾಡಿದ್ದು ನೋಡಿ ಆಶ್ಚರ್ಯವಾಯಿತು. ಏಕೀಕರಣದ ವಿಷಯ ಕೇಳುವುದಕ್ಕೇನೆ ಹೋದದ್ದು. "ಆಂಧ್ರರು, ಕನ್ನಡಿಗರು, ತಮಿಳರು, ಮರಾಠಿಯವರು ಎಲ್ಲರೂ ನೀವು ನೀವೇ ಸೇರಿ ತೀರ್ಮಾನಕ್ಕೆ ಬಂದು ಆ ಒಪ್ಪಂದವನ್ನು ಸರ್ಕಾರದ ಮುಂದೆ ಇಡಿ. ಸರ್ಕಾರ ಒಪ್ಪಲೇ ಬೇಕು" ಎಂದರು. ಇದೊಂದೇ ದಾರಿ—ಎಂದು ಅವರ ಮತ. ಆದರೆ ಇವರೆಲ್ಲ ಸೇರುವುದು ನಿಜವೇ, ಸೇರಿದರೂ ಒಪ್ಪಂದಕ್ಕೆ ಬರುವುದು ನಿಜವೆ? ಕಪ್ಪೆ ತಕ್ಕಡಿಗೆ ಹಾಕಿದ ಹಾಗೆಯೇ ಸರಿ!

ಇವತ್ತು ಮಧ್ಯಾಹ್ನ ಮೂರು ಗಂಟೆಗೆ ಒಂದು ಮೀಟಿಂಗ್ ಇದೆ. ನಾಳೆ ಒಂದು ದಿನ ರಜ. ಸ್ವಾತಂತ್ರ್ಯ ದಿನಾಚರಣೆಯ ನಿಮಿತ್ತ. ನಾಡಿದ್ದಿನಿಂದ ಅಸೆಂಬ್ಲಿ ಆರಂಭ.

ಮೊನ್ನೆ ಸಂಜೆ ೫-೧೫ ಗಂಟೆಗೆ ಪೂಜ್ಯ ಬಾಪೂಜಿಯವರು ಕೊಲೆಗೆ ಈಡಾಗಿ ಪರಂಧಾನವನ್ನೈದಿದರು....ನಿನ್ನೆ ಸಂಜೆ ೫ ಗಂಟೆಗೆ ಅವರ ದಹನ ಕ್ರಿಯೆಯೂ ಆಯಿತು!

ಮೊನ್ನೆ ೫-೧೫ ಗಂಟೆಗೆ ಪಂಡಿತ ಜವಹರ್‌ಲಾಲರ ಕೊಠಡಿಯಲ್ಲಿ ವಿದೇಶಾಂಗ ಸಲಹಾ ಸಮಿತಿಯ ಸಭೆ ನಡೆಸುತ್ತಿದ್ದೆವು. ಪ್ರಾರಂಭಿಸಿ ೧-೨ ನಿಮಿಷ ಆಗಿರಬಹುದು. ಜವಹರ್‌ಲಾಲರಿಗೆ ಫೋನ್ ಕರೆ ಬಂದಿತು. ಒಡನೆಯೇ ಬಂದು "ಗಾಂಧೀಜಿಗೆ ಗುಂಡಿನೇಟು ಬಿದಿದ್ದೆ........ಸಭೆ ಮುಂದುವರಿಸೋಣ!" ಎಂದರು. ಕೂಡಲೆ

ನಾವೆಲ್ಲ ಬಿರ್ಲಾ ಭವನಕ್ಕೆ ಬಂದೆವು. ಅಷ್ಟು ಹೊತ್ತಿಗೆ ಅವರ ಪ್ರಾಣ ಹೋಗಿತ್ತು. ಐದು ಗಂಟೆಯವರೆಗೆ ಸರದಾರ್ ಪಟೇಲರ ಜತೆಗೆ ಮಾತನಾಡುತ್ತಿದ್ದರು. ಐದು ಗಂಟೆ ಆದ ಒಡನೆ "ಪ್ರಾರ್ಥನೆಗೆ ಹೊತ್ತಾಯಿತು. ನಾನು ಹೊರಡಬೇಕು" ಎಂದು ಗಾಂಧೀಜಿ ಹೊರಟರು. ಅವರು ಕುಳಿತುಕೊಳ್ಳುವ ಸ್ಥಳದಿಂದ ಪ್ರಾರ್ಥನಾ ಸ್ಥಳಕ್ಕೆ ಸುಮಾರು ೨೦೦ ಗಜ ಆಗಬಹುದು. ಕೊಠಡಿಯಿಂದ ಹೊರಟು ಸ್ಥಳಕ್ಕೆ ಬರಲು ಮೆಟ್ಟಲು ಹತ್ತುತ್ತಿದ್ದರು. ಆಗ ನಾತುರಾಮ ವಿನಾಯಕ ಗೋಡ್ಸೆ ಎಂಬ ಒಬ್ಬ ಯುವಕ— ಖಾಕಿ ಉಡುಪಿನಲ್ಲಿದ್ದ—ರಿವಾಲ್ವರ್‌ನಿಂದ ನಾಲ್ಕು ಗುಂಡು ಹೊಡೆದ. ಮೂರು ನೇರವಾಗಿ ಗಾಂಧೀಜಿಗೆ ಬಿದ್ದವು! ಒಂದು ಗುಂಡು ಬಲಗಡೆ ಎದೆಯ ಮೇಲೆ ಒಂದು ಒಂದೂವರೆ ಅಂಗುಲ ಎತ್ತರದಲ್ಲಿ, ಇನ್ನೊಂದು ಇದರ ಕೆಳಗೆ ಸ್ವಲ್ಪ ಎಡ ಭಾಗದಲ್ಲಿ ಎದೆಗುಂಡಿಗೆಗೆ, ಮೂರನೆಯದು ಎಡಗಡೆ ಹೊಟ್ಟೆಗೆ! "ಹೇ ರಾಮ್! ಹೇ ರಾಮ್!" ಎಂದು ಗಾಂಧೀಯವರು ಹಿಂದಕ್ಕೆ ಬಿದ್ದರು. ಹಿಂದೆ ಇದ್ದ ಅವರ ಕಾರ್ಯದರ್ಶಿಗಳು ಹಿಡಿದುಕೊಂಡು, ಅವರು ಉಪವಾಸ ಕಾಲದಲ್ಲಿ ಮಲಗುತ್ತಿದ್ದ ಕೋಣೆಗೆ ಒಯ್ದರು....೨-೩ ನಿಮಿಷದಲ್ಲೆ ಪ್ರಾಣ ಹೋಯಿತು. ರಾಮನಾಮ ಸ್ಮರಣೆಯೇ ಅವರ ಕೊನೆಯ ಮಾತಾಯಿತು! ನಾವು ಹೋಗುವ ಹೊತ್ತಿಗೇನೇ ಬಿರ್ಲಾ ಭವನ ಜನಸಂದಣಿಯಿಂದ ಕಿಕ್ಕಿರಿದು ತುಂಬಿತ್ತು. ಯಾರನ್ನೂ ಒಳಗೆ ಬಿಡಲಿಲ್ಲ. ಮಂತ್ರಿಗಳು, ವೈಸರಾಯ್ ಮುಂತಾದವರನ್ನು ಮಾತ್ರ ಬಿಡುತ್ತಿದ್ದರು. ಎಲ್ಲರೂ ಬಿಕ್ಕಿ ಬಿಕ್ಕಿ ಅಳುವವರೇ! ಪಟೇಲ್ ಮತ್ತು ಜವಾಹರ ಲಾಲ್ ತುಂಬ ಅತ್ತರು. ನಿನ್ನೆ ಬೆಳಿಗ್ಗೆ ಬಿರ್ಲಾ ಭವನಕ್ಕೆ ಹೋಗಿ ಗಾಂಧೀಜಿಯವರ ಕಳೇಬರವನ್ನು ದರ್ಶನ ಮಾಡಿಕೊಂಡು ಬಂದೆವು. ಮುಖದಲ್ಲಿ ಅದೇ ನಿರ್ಲಿಪ್ತ ಶಾಂತಮುದ್ರೆ! ಮಲಗಿ ನಿದ್ರೆ ಹೋಗು ತ್ತಿದ್ದಾರೇನೊ ಎಂಬಂತಿದ್ದರು. ಬಿರ್ಲಾ ಭವನದಿಂದ ಕ್ವೀನ್ಸ್‌ವೇ, ಕಿಂಗ್ಸ್‌ವೇ ಮಾರ್ಗವಾಗಿ ಯಮುನಾ ತೀರ—೭ ಮೈಲಿಯಾಗುತ್ತೆ. ದಾರಿ ಉದ್ದಕ್ಕೂ ಸುಮಾರು ಹತ್ತು ಲಕ್ಷ ಜನ ಸಾಲುಗಟ್ಟಿ

ಗಾಂಧೀಜಿಯ ಕೊನೆಯ ದರ್ಶನಕ್ಕೆ ಕಾದು ನಿಂತಿದ್ದರು. ಕೆಂಪು ಕೋಟೆಗೂ ಯಮುನಾ ನದಿಗೂ ಮಧ್ಯೆ ದೊಡ್ಡ ಮೈದಾನವಿದೆ. ಅಲ್ಲಿದ್ದ ಗಿಡಗಂಟೆ ಕಡಿದು—ಮಧ್ಯೆ ಒಂದು ವೇದಿಕೆ ಮಾಡಿ—ಅಲ್ಲಿ ಚಿತೆಯನ್ನು ಮಾಡಿದ್ದರು. ಗಂಧದ ಚಕ್ಕೆ, ತುಪ್ಪದಲ್ಲಿ ಗಾಂಧೀಜಿ ಯವರ ದೇಹ ಹೋಮವಾಯಿತು! ೭-೮ ಲಕ್ಷ ಜನಸಮೂಹ ಇರಬಹುದು! ಗಾಂಧೀಜಿಯವರ ಮಗ ರಾಮದಾಸ ಗಾಂಧಿಯವರು ಚಿತೆಗೆ ಬೆಂಕಿ ಇಟ್ಟರು. ಬಂಗಾಲ ಗವರ್ನರ್ ಶ್ರೀ ರಾಜಗೋಪಾಲಾ ಚಾರ್ಯ, ಸಂಯುಕ್ತ ಪ್ರಾಂತದ ಗವರ್ನರ್ ಶ್ರೀಮತಿ ಸರೋಜಿನಿ ನಾಯ್ಡು, ಮದ್ರಾಸ್ ಗವರ್ನರ್ ಸರ್ ರ್ಯಾಲ್ಫ್‌ಸ್ಯೆ, ವೈಸರಾಯ್ ದಂಪತಿಗಳು ಆ ಕಾಲದಲ್ಲಿ ಬಂದಿದ್ದರು. ಹೆಂಗಸರು ಮಕ್ಕಳು ಬಿಕ್ಕಿ ಬಿಕ್ಕಿ ಅಳುತ್ತಿದ್ದರು. "ಮಹಾತ್ಮಾ ಗಾಂಧಿ ಅಮರವಾದರು!" ಎಂದು ಜನ ಘೋಷಣೆ ಮಾಡುತ್ತಿತ್ತು. ಒಂದು ಸಮುದ್ರದಂತೆ ಜನ ಸಮೂಹ ನೆರೆದಿತ್ತು. ಗಾಂಧೀಜಿಯ ಮೃತದೇಹವನ್ನು ಸ್ಮಶಾನ ಯಾತ್ರೆಗಾಗಿ ಒಯ್ಯುವಾಗ ಅಶ್ವಬಲ, ವಾಯುಬಲ, ನಾವಿಕಬಲದ ಎಲ್ಲ ಅಂಗಾಂಗಳ ಸೈನಿಕರು ಹಿಂದೆಯೂ ಮುಂದೆಯೂ ಸಾಲುಗಟ್ಟಿ ನಡೆಯುತ್ತ ಗೌರವ ತೋರಿಸುತ್ತಿದ್ದರು. ವಿಮಾನಗಳು ಮೇಲಿಸಿಂದ ಹೂವು ಎರಚುತ್ತಿದ್ದವು. ಎಲ್ಲ ಮುಗಿಯುವ ಹೊತ್ತಿಗೆ ೬ ಗಂಟೆ ಯಾಯಿತು. ಗಾಂಧೀಜಿಯವರನ್ನು ಗುಂಡಿನಿಂದ ಹೊಡೆದ ಸ್ಥಳದ ಮೃತ್ತಿಕೆಯನ್ನು ನಾನೂ ತೆಗೆದಿಟ್ಟುಕೊಂಡಿದ್ದೇನೆ. ಚಿತೆಯ ಸಮೀಪ ನಾನೂ ಹೋಗಿ ಆ ಹೋಮದ ಸುವಾಸನೆಯನ್ನು ಸೇವಿಸುವ ಪುಣ್ಯ ನನಗೂ ಲಭಿಸಿತು.

ಚಂದ್ರು—ಸಾವಿರಾರು ವರ್ಷಗಳಿಂದ ಗುಲಾಮಗಿರಿಯಲ್ಲಿದ್ದ ಭಾರತ ದೇಶ ಸ್ವಾತಂತ್ರ್ಯ ಪಡೆದ ಸಂತೋಷಪಟ್ಟ ಉತ್ಸವವನ್ನು ನೋಡಿದೆ. ಆ ಸ್ವತಂತ್ರ ಭಾರತದ ನಿರ್ಮಾಣಕರ್ತ ಇಡೀ ದೇಶಕ್ಕೆ ದೇಶವೇ 'ಬಾಪು—ತಂದೆ' ಎಂದು ಕರೆಯುತ್ತಿದ್ದ ಗಾಂಧೀಜಿಯವರ ಅಂತ್ಯಯಾತ್ರೆಯನ್ನೂ ಅದೇ ಕಣ್ಣುಗಳಿಂದ ನೋಡಿದೆ....ಏನು ಜಟಿಲ

ಪ್ರಶ್ನೆ ಬಂದರೂ ಗಾಂಧೀಜಿ ಬಳಿ ಹೋಗೋಣ ಎನ್ನುತ್ತಿದ್ದೆವು! ಇನ್ನು ಹೋಗುವುದು ಯಾರ ಬಳಿ? ಎಲ್ಲಿ ನೋಡಿದರೂ, ಯಾರ ಮುಖದಲ್ಲಿ ನೋಡಿದರೂ ನಿರಾಶೆ, ನಿರುತ್ಸಾಹ, ಶೂನ್ಯತೆ. ಗೀತೆಯಲ್ಲಿ ಶ್ರೀಕೃಷ್ಣ "ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ, ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ" ಎಂದು ಹೇಳಿದ್ದಾನೆ. ಶ್ರೀಕೃಷ್ಣನಂತರ ಯುಗಪುರುಷ ಮಹಾತ್ಮಾ ಗಾಂಧಿಯ ಉದಯವಾಗಲು ಸಹಸ್ರಾರು ವರ್ಷ ಬೇಕಾಯಿತು. ಇನ್ನೊಬ್ಬ ಯುಗ ಪುರುಷ ಬರುವುದೆಂದು? ಸುಖ ದುಃಖಗಳಲ್ಲಿ ಸಮಭಾವನೆ ಹೊಂದಿ ಸ್ಥಿತಪ್ರಜ್ಞನಾಗಿ, ಧ್ರುವ ತಾರೆಯಂತೆ ಸತ್ಯಮಾರ್ಗವನ್ನು ತೋರಿಸುವವರು ಯಾರು? ಜವಹರಲಾಲರಂತೂ ಹತ್ತು ವರ್ಷದಿಂದ ಮುದುಕರಾದಂತೆ ತೋರುತ್ತಿದಾರೆ. ಅವರ ಹೊರೆಯಂತೂ ಈಗ ಬಹಳವಾಗಿದೆ. ನಾವೆಲ್ಲ ಈಗ ಅವರಿಗೆ ಬೆಂಬಲರಾಗಿ ನಿಂತು ಸರ್ವ ತ್ಯಾಗಕ್ಕೂ ಸಿದ್ಧರಿರಬೇಕು. ಗಾಂಧೀಜಿಯವರ ನಾಯಕತ್ವದಲ್ಲಿ ಹೋರಾಡಿ ಸಂಪಾದಿಸಿರುವ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕು. ಸಿಟ್ಟಿನ ರಭಸದಲ್ಲಿ ಬುದ್ಧಿಯನ್ನು ಕದಡಿಸಿಕೊಳ್ಳದೆ ಗಾಂಧೀಜಿಯವರು ಹಾಕಿಕೊಟ್ಟ ಮಾರ್ಗದಲ್ಲೇ ಮುಂದುವರಿಯಬೇಕು.

ಸಧ್ಯ ಏನೂ ಬರೆಯಲು ತೋರುವುದಿಲ್ಲ. ಈ ದಿನ ಬೆಳಿಗ್ಗೆ ಶ್ರೀ ದಾಸಪ್ಪ, ಸಿದ್ದಯ್ಯಾ, ಮರಿಯಪ್ಪ, ಸಿದ್ದಲಿಂಗಯ್ಯ ಬೆಂಗಳೂರಿಗೆ ಹೊರಟರು. ನಿನ್ನೆ ಅಲ್ಲಿ ಬಂದಿದ್ದರು. ನಾನು ಮೈಸೂರು ಕಾನ್‌ಸ್ಟಿಟ್ಯೆಯೆಂಟ್ ಅಸೆಂಬ್ಲಿಗೆ ನಿಲ್ಲುವ ವಿಚಾರ ಚರ್ಚೆ ಮಾಡಿದರು. ನಾನೂ ಹೆಚ್ಚಾಗಿ ಆಸೆ ಪಡಬಾರದು. ಶ್ರೀ ಮಾಧವರಾಯರೂ ತುಂಬ ತ್ಯಾಗ ಮಾಡಿದ್ದಾರೆ. ನಾನು ಅಂಥವರಿಗೆ ಅಡ್ಡಬರಬಾರದು. ಆದ್ದರಿಂದ ಅವರಿಗೇನೇ ಅವಕಾಶ ಕೊಡಿ ಎಂದು ಹೇಳಿದೆ. ಆರೋಗ್ಯವಾಗಿದ್ದೇನೆ.

೧೪-೨-೪೮

ನಿನ್ನ ಕಾಗದ ತಲುಪಿತು. ನಾನು ಮಹಾತ್ಮರ ಅಸ್ತಿ ಸ್ಪೆಷಲ್ ರೈಲಿನಲ್ಲಿ ಪ್ರಯಾಗಕ್ಕೆ ಹೋಗಿದ್ದೆ. ನಿನ್ನೆ ಮಧ್ಯಾಹ್ನ ೧೧ ಗಂಟೆಗೆ

ಅದೇ ರೈಲಿನಲ್ಲಿ ಹಿಂದಿರುಗಿದೆವು. ೧೧ನೇ ರಾತ್ರಿ ೧೧ ಗಂಟೆಗೆ ಟಿಕೆಟ್ ಕಳಿಸಿದರು. ೧೧ನೇ ಬೆಳಿಗ್ಗೆ ೪ ಗಂಟೆಗೆ ಹೊಸ ದಿಲ್ಲಿ ಸ್ಟೇಷನ್‌ಗೆ ಬರಬೇಕೆಂದು ತಿಳಿಸಿದ್ದರು. ಮೂರು ಗಂಟೆಗೇನೆ ಎದ್ದು ಹೊರಟೆ. ವೈಸರಾಯರಿಗಾಗಿ ಒಂದು ಬೇರೆ ಪ್ಲ್ಯಾಟ್‌ಫಾರಂ ಇದೆ. ಅಲ್ಲಿ ರೈಲು ನಿಲ್ಲಿಸಿದ್ದರು. ದಾರಿಯುದ್ದಕ್ಕೂ ಪೋಲೀಸ್ ಮತ್ತು ಮಿಲಿಟರಿ ಪಹರೆ. ವೈಸರಾಯರ ಸ್ಪೆಷಲ್ ಗೇಟಿನಿಂದ ನಮ್ಮ ಕಾರನ್ನು ಬಿಟ್ಟರು. ಮೈಸೂರು ಸರ್ಕಾರದ ಮೋಟಾರ್ ಕಾರೂ ಇಲ್ಲಿ ಒಂದು ಇದೆ. ಈಗ ಅದನ್ನು ನಮ್ಮ ಉಪಯೋಗಕೆ ಕೊಟ್ಟಿದ್ದಾರೆ. ಅದರಲ್ಲಿ ಸ್ಟೇಷನ್‌ಗೆ ಹೋದೆ. ನಾವು ಹೋಗುವ ಹೊತ್ತಿಗೇನೆ ಆ ಕೊರೆಯುವ ಚಳಿಯಲ್ಲಿ 'ಬಾಪೂಜಿಯ—ಅಸ್ಥಿಯ' ಅಂತಿಮ ದರ್ಶನಕ್ಕೆ ಜನ ಸಾಲುಗಟ್ಟಿ ನಿಂತಿದ್ದರು. ನಮಗೆ ಒಬ್ಬೊಬ್ಬರಿಗೆ ಮೂರನೆ ಕ್ಲಾಸ್ ಗಾಡಿಯಲ್ಲಿ ಒಂದೊಂದು ಪೂರ್ತಿ ಸೀಟ್ ಕೊಟ್ಟಿದ್ದರು. ಐದು ಗಾಡಿಗಳನ್ನು ಹಾಕಿದ್ದರು. ಮಧ್ಯದ ಗಾಡಿಯಲ್ಲಿ ಒಂದು ದೊಡ್ಡ ಮೇಜನ್ನು ಇಟ್ಟು, ಅದರ ಮೇಲೆ ರಾಷ್ಟ್ರಧ್ವಜವನ್ನು ಹೊದಿಸಿ, ಮೇಲೆ ಒಂದು ಪಲ್ಲಕ್ಕಿಯಲ್ಲಿ ಒಂದು ಮಂಟಪವನ್ನು ಇಟ್ಟು, ಅದರಲ್ಲಿ ಒಂದು ತಾಮ್ರದ ಕೊಡದಲ್ಲಿ ಮಹಾತ್ಮರ ಅಸ್ಥಿಯನ್ನು ಇಟ್ಟಿದ್ದರು. ಗಾಡಿಗೆ ಎರಡು ಕಡೆಯಲ್ಲೂ ರಾಷ್ಟ್ರಧ್ವಜಗಳನ್ನು ಕಟ್ಟಿ, ಹೂವಿನಿಂದ ಅಲಂಕರಿಸಿದ್ದರು. ಮುಂದಿನ ಎರಡು ಗಾಡಿ, ಹಿಂದಿನ ಎರಡು ಗಾಡಿಗಳಲ್ಲಿ—ಜತೆಗೆ ಹೋಗುವವರಿಗೆ ಜಾಗ ಮಾಡಿದ್ದರು. ಪ್ರತಿಯೊಂದು ಕಂಪಾರ್ಟ್‌ಮೆಂಟ್ ಮುಂದೆಯೂ ಒಬ್ಬೊಬ್ಬ ರೈಲ್ವೆ ನೌಕರಿದ್ದು, ಟಿಕೆಟ್ ಇದ್ದವರನ್ನು ಮಾತ್ರ ಒಳಗೆ ಬಿಡುತ್ತಿದ್ದರು. ಪ್ಲ್ಯಾಟ್‌ಫಾರಂ ಮೇಲೆ ಮತ್ತು ಸುತ್ತಲೂ ಮಿಲಿಟರಿ ಕಾವಲು ಇತ್ತು. ೪-೨೦ ರಿಂದ ೬-೩೦ ವರೆಗೆ ಜನ ಸಾಲುಗಟ್ಟಿ ಅಸ್ಥಿಯ ದರ್ಶನ ಮಾಡಿಕೊಂಡು ಹೋದರು. ಹುಡುಗರು—ಮಕ್ಕಳು—ಹೆಂಗಸರು—ಗಂಡಸರು ಲಕ್ಷಗಟ್ಟಲೆ ಜನ ಶಾಂತರೀತಿಯಿಂದ 'ರಘುಪತಿ ರಾಘವ ರಾಜಾರಾಂ ಪತಿತ ಪಾವನ ಸೀತಾರಾಂ' ಎಂದು ರಾಮನಾಮ

ಸ್ಮರಣೆ ಮಾಡುತ್ತ, ನಮಸ್ಕಾರ ಮಾಡಿ **ಹೋ**ಗುತ್ತಿದ್ದರು. ೬-೩೦ ಆದರೂ ಎಲ್ಲರೂ ದರ್ಶನ ಮಾಡಲಾಗಲಿಲ್ಲ. ರೈಲ್ವೆ ಪ್ಲಾಟ್‌ಫಾರಂ ಉದ್ದಕ್ಕೂ ಸುಮಾರು ೨-೩ ಮೈಲಿ ಸಾಲುಗಟ್ಟಿ ನಿಂತಿದ್ದರು. ಹಳೇ ದೆಹಲಿ ಸ್ಟೇಷನ್ನಲ್ಲಿ ಗಾಡಿ ನಿಲ್ಲಲಿಲ್ಲ. ಮಿಲಿಟರಿ ಪಹರೆ ಮಾತ್ರ ಇತ್ತು. ಮಿಲಿಟರಿ ಸೆಲ್ಯೂಟ್ ಕೊಟ್ಟರು. ಯಮುನಾ ನದಿ ಮೇಲೆ ರೈಲು ಹೋದಾಗ ಮಂಜು ಹೆಪ್ಪುಗಟ್ಟಿತ್ತು. ಪ್ರಯಾಗವನ್ನು ರೈಲು ಸೇರುವುದರ ಒಳಗೆ ತಾನೂ ಹೋಗಿ ಎದುರುಗೊಳ್ಳಬೇಕು ಎಂಬಂತೆ ಯಮುನಾ ನದಿಯ ಮೇಲೆ ಮಂಜು ತೇಲಿ ಓಡುತ್ತಿತ್ತು! ಮೊದಲು ರೈಲು ನಿಂತ ಸ್ಟೇಷನ್ ಎಂದರೆ ಘಾಜಿಯಬಾದ್. ಮೊದಲು ಹೆಂಗಸರು ಹುಡುಗರು, ಅನಂತರ ಗಂಡಸರು ಎಲ್ಲರೂ ಮೌನದಿಂದ ಮುಂದುವರಿದು ಗಾಡಿಯ ಮುಂದೆ ಸಾಲುಗಟ್ಟಿ ದರ್ಶನ ಮಾಡಿದರು. ದಾರಿಯುದ್ದಕ್ಕೂ ರೈಲು ದಾರಿಯ ಎರಡು ಪಕ್ಕದಲ್ಲೂ ಜನ ಸಾಲುಗಟ್ಟಿ ನಿಂತಿದ್ದರು. ದನಕಾಯುವವರು, ಹೊಲದ ಕೆಲಸ ಮಾಡುವವರು, ಕಸ ಗುಡಿಸುವವರು ಕೈಮುಗಿದು ನಮಸ್ಕರಿಸುತ್ತ ತಲೆ ಬಾಗಿ ನಿಲ್ಲುತ್ತಿದ್ದರು. ಅನಂತರ ಖುರ್ಜ, ಅಲಿಘಡ, ಹತ್ರಾಸ್, ಟುಂಡ್ಲ, ಫಿರೋಜಾಬಾದ್, ಎಟಾವಾ, ಫೆಪ್ಪುಂಡೆ, ಕಾನ್ಪುರ ಇವೆಲ್ಲ ಜಂಕ್ಷನ್ ಸ್ಟೇಷನ್‌ಗಳು. ಟುಂಡ್ಲದಲ್ಲಂತೂ ಗುಡ್ಸ್ ವ್ಯಾಗನ್‌ಗಳ ಮೇಲೆ, ರೈಲ್ವೆ ಎಂಜಿನ್‌ಗಳ ಮೇಲೆ ಎಲ್ಲಿ ಜಾಗ ಸಿಕ್ಕರೆ ಅಲ್ಲಿ ಜನ ತುಂಬಿದ್ದರು. ಕಾನ್‌ಪುರದಲ್ಲಿ ರೈಲು ಎರಡು ಗಂಟೆ ನಿಂತಿತ್ತು. ಸ್ಟೇಷನ್ ಆಚೆ ೫-೬ ಮೈಲಿ, ಈಚೆ ೫-೬ ಮೈಲಿ ಜನ ಸಾಲುಗಟ್ಟಿ ನಿಂತಿದ್ದರು. ಸ್ಟೇಷನ್ನಲ್ಲಿ ಅಸಾಧ್ಯ ನೂಕು ನುಗ್ಗಲು. ಎರಡು ಗಂಟೆಯಾದರೂ ಸಾಲಲಿಲ್ಲ, ಹಾಕಿದ್ದ ಕಬ್ಬಿಣದ ಬಾಗಿಲು ಮುರಿದು ಹೋಯಿತು. ಎಷ್ಟೋ ಜನ ಮೂರ್ಛೆ ಹೋದರು. ನಾಲ್ಕು ಜನ ಮಡಿದರು ಎಂತ ಕೇಳಿದೆವು. ಕಾನ್‌ಪುರ ದಾಟುವವರೆಗೂ ಸುಮಾರು ೧೦-೧೫ ಮೈಲಿ ದೂರ ರೈಲು ಬಹಳ ನಿಧಾನವಾಗಿ ಹೋಯಿತು. ಅಲಿಘಡದಲ್ಲಿ ಛತ್ತಾರಿನ ದಿವಾನರು, ಇಸ್ಮೈಲ್ ಖಾನ್ (ಇಬ್ಬರೂ ಮುಸ್ಲಿಂ ಲೀಗ್ ಮುಂದಾಳುಗಳು) ಬಂದು ಹೂಮಾಲೆ

ಅರ್ಪಿಸಿದರು. ಛತ್ತಾರಿ ನವಾಬರು ಸಂಯುಕ್ತ ಪ್ರಾಂತದ ಮುಖ್ಯ ಮಂತ್ರಿಗಳೂ ಆಮೇಲೆ ಗವರ್ನರ್ ಆಗಿದ್ದರು. ಆಮೇಲೆ ಹೈದರಾಬಾದ್ ಮುಖ್ಯ ಮಂತ್ರಿಗಳಾಗಿದ್ದರು. ಕಾರ್ನಪುರದಲ್ಲಿ ಅನೇಕ ಯೂರೋಪಿಯನ್ ಸ್ತ್ರೀಪುರುಷರು, ಪಾದ್ರಿಗಳು ಬಂದಿದ್ದರು. ಕಾರ್ನಪುರ ಬಂದರಲ್ಲಿ ೧೦ ಲಕ್ಷ ಜನ ಸೇರಿದ್ದರು. ರಾತ್ರಿ ೮-೩೦ ಗಂಟೆಗೆ ರಸೂಲಾಬಾದ್ ಮುಟ್ಟಿತು. ಅಲ್ಲಿ ರಾತ್ರಿ ರೈಲು ನಿಂತು ಮಾರನೆ ಬೆಳಿಗ್ಗೆ ೭ ಗಂಟೆಗೆ ಅಲಹಾಬಾದಿಗೆ ಹೊರಟಿತು.

ರಸುಲಾಬಾದಿನಲ್ಲಿ ಪೂರಿ ಪಲ್ಯ, ಹಾಲು ಕೊಟ್ಟರು. ರಸೂಲಾ ಬಾದಿನಿಂದ ಹೊರಟಾಗ ಪುನಃ ಟೀ ಕೊಟ್ಟರು. ಇಟಾವಾದಲ್ಲು ಜನ ಸಂದಣಿ ಅಸಾಧ್ಯವಾಗಿತ್ತು. ಪ್ರತಿಯೊಂದು ಸ್ಟೇಷನ್ ಪ್ಲಾಟ್‌ಫಾರಂನ್ನು ನೀರಿನಿಂದ ತೊಳೆದು ಶುಭ್ರವಾಗಿಟ್ಟಿದ್ದರು. ಪ್ರತಿ ಫರ್ಲಾಂಗಿಗೂ (ದೆಹಲಿಯಿಂದ ಅಲಹಾಬಾದಿಗೆ ೪೦೦ ಮೈಲಿಯಾಗುತ್ತೆ) ಮಿಲಿಟರಿ ಕಾವಲು. ರೈಲು ನಿಲ್ಲದ ಸ್ಟೇಷನ್‌ಗಳಲ್ಲಿ ಸಹ ಜನಗಳು ನಮ್ರತೆಯಿಂದ ತಲೆಬಾಗಿ ಕೈ ಮುಗಿಯುತ್ತಿದ್ದರು. ನಿಂತಲ್ಲಿಂದಲೇ ಹೂವನ್ನು ಎರಚುತ್ತಿದ್ದರು. ಒಂದು ಹಳ್ಳಿಯ ಸಮೀಪ ರೈಲು ಓಡುತ್ತಿದ್ದಾಗ ಶಾಲೆಯ ಹುಡುಗರು ಓಡಿ ಬಂದರು. ಆದರೆ ರೈಲಿನ ವೇಗ ಬಹಳವಿತ್ತು. ಅವರ ಪುಟ್ಟ ಕೈಗಳಿಂದ ನಿಂತಲ್ಲಿಂದಲೇ 'ಮಹಾತ್ಮಾ ಗಾಂಧಿ ಅಮರ ಹೋ' ಎಂದು ಹೂವನ್ನೆರಚಿದರು.

ಅಲಹಾಬಾದಿಗೆ ೬-೭ ಮೈಲಿ ದೂರದಲ್ಲಿ ಒಂದು ವಿಮಾನ ನಿಲ್ದಾಣ ವಿದೆ. ಅಲ್ಲಿಗೆ ಬಂದೊಡನೆ ವಿಮಾನಗಳು ರೈಲು ಮೇಲೆ ಹಾರಾಡಿ ಹೂವಿನ ಮಳೆಯನ್ನು ಸುರಿಯುತ್ತಿದ್ದವು. ೯ ಗಂಟೆ ಸರಿಯಾಗಿ ಅಲಹಾಬಾದ್ ರೈಲು ನಿಲ್ದಾಣವಲ್ಲಿ ಪಂಡಿತ ನೆಹರು, ಸರದಾರ್ ಪಟೇಲ್, ಆಜಾದ್, ಗೋವಿಂದ ವಲ್ಲಭ ಪಂತ್, ಡಾ. ಕಟ್ಜು, ಸರೋಜಿನಿ ನಾಯ್ಡು, ಗಾಂಧಿ, ದೇವದಾಸ್ ಗಾಂಧಿ ಮುಂತಾದವರಿದ್ದರು. ನಾವೆಲ್ಲ ಬಂಡೆಯ ಮೇಲೆಯೇ ನಿಂತಿದ್ದೆವು. ಒಂದು ಕಡೆಯಿಂದ ಗಂಗಾ ನದಿ ಬಂದು ಯಮುನಾ ನದಿಯೊಳಗೆ ನುಗ್ಗಿ ಅನಂತರ ಎರಡೂ ಸೇರಿ

ಗಂಗೆಯಾಗಿ ಮುಂದುವರೆಯುತ್ತದೆ. ಅದಕ್ಕೆ ತ್ರಿವೇಣಿ ಸಂಗಮವೆಂದು ಹೆಸರು. ಇನ್ನೊಂದು ಸರಸ್ವತಿ ನದಿ—ಗುಪ್ತಗಾಮಿನಿಯಾಗಿ ಆಶ್ಚರ್ಯವಾಗಿ ಹರಿಯುತ್ತೆಂದು ಪ್ರತೀತಿ. ಈ ಮೂರು ಮಹಾನದಿಗಳು ಸೇರುತ್ತವೆಯೆಂದು ತ್ರಿವೇಣಿ ಸಂಗಮವೆಂದು ಹೆಸರು. ಗಂಗಾ ನದಿಯ ನೀರು ಬಿಳುಪು. ಯಮುನಾ ನದಿಯ ನೀರು ಕಪ್ಪು ಕಾಣುತ್ತದೆ. ಗಂಗೆಯ ವೇಗ ಹೆಚ್ಚು, ಯಮುನೆ ಮಂದಗಾಮಿನಿ. ಅದಕ್ಕೇನೆ ಗಂಗಾನದಿ ಯಮುನಾ ನದಿಯ ಒಳಗೆ ರಭಸದಿಂದ ನುಗ್ಗಿ ಸೇರುವುದು. ದೋಣಿಯು ಸುತ್ತಲೂ ನಾಲ್ಕು ಕಡೆಗೆ ಹೋಗಿ ಎಲ್ಲರಿಗೂ ದರ್ಶನ ಲಾಭ ದೊರಕಿಸಿತು. ಅನಂತರ ಎರಡು ಗಂಟೆಗೆ ಸರಿಯಾಗಿ ಯಾವ ಸ್ಥಳದಲ್ಲಿ ಕಸ್ತೂರಿ ಬಾ, ಮೋತಿಲಾಲ್ ನೆಹರು, ಮದನಮೋಹನ ಮಾಲವೀಯ ಮುಂತಾದ ಅನೇಕ ಮಹಾವಿಭೂತಿಗಳ ಅಸ್ತಿಗಳನ್ನು ಭಾಗೀರಥಿಯ ಮಡಲಿಗೆ ಕೊಟ್ಟಿದ್ದರೋ ಅದೇ ಸ್ಥಳದಲ್ಲಿ ವೈದಿಕರ "ಹರಿಃ ಓಂ ತತ್ ಸತ್" ಎಂಬ ಘೋಷಣೆ, "ರಘುಪತಿ ರಾಘವ ರಾಜಾರಾಂ, ಪತಿತಪಾವನ ಸೀತಾರಾಂ" ಎಂಬ ಜನಘೋಷಣೆಯೊಂದಿಗೆ 'ಬಾಪೂಜಿ'ಯ ಅಸ್ತಿಗಳನ್ನು ಗಂಗೆಯ ಮಡಲಿಗೆ ಅರ್ಪಿಸಲಾಯಿತು. ಮೇಲೆ ವಿಮಾನಗಳು ಹೂಮಳೆಯನ್ನೆರಚುತ್ತಿದ್ದವು. ಸುಮಾರು ಅರ್ಧ ನದಿಯವರೆಗೂ ಜನ ನಡು ನೀರಿನಲ್ಲಿ ಕೈಮುಗಿಯುತ್ತ ಮಂತ್ರಗಳನ್ನು ಜಪಿಸುತ್ತಿದ್ದರು. ದಂಡೆಯ ಮೇಲಂತೂ ಈ ಕಡೆ ೨ ಮೈಲಿ, ಆ ಬದಿ ೨ ಮೈಲಿ, ಎದುರು ದಂಡೆಯ ಮೇಲೂ ಅಸಂಖ್ಯಾತ ಜನಸಂದಣಿ. ದೋಣಿ ಹಿಂದಿರುಗಿದೊಡನೆ ಎಲ್ಲರ ಮುಖದ ಮೇಲೂ ಒಂದು ಬಗೆಯ ನುಂಗಲಾರದ ದುಃಖ! ಆ ದೃಶ್ಯವನ್ನು ನೋಡಿದರೆ ಗಾಂಧೀಜಿ ಇಂದು ತನ್ನ ಪಾರ್ಥಿವ ದೇಹ ಹೋದರೂ ಭಾರತದ ೩೦ ಕೋಟಿ ಜನರ ಹೃದಯದಲ್ಲಿ ತನ್ನ ಆತ್ಮಜ್ಯೋತಿಯನ್ನು ಬೆಳಗಿಸಿದ್ದಾನೆಂದು ಭಾಸವಾಗುತ್ತಿತ್ತು. ಉನ್ನತ ಅಧಿಕಾರಿಗಳು, ಹೈಕೋರ್ಟ ಜಡ್ಜಿಗಳು, ಕಾಂಗ್ರೆಸ್ ನಾಯಕರು, ಮಿಲಿಟರಿ ಅಧಿಕಾರಿಗಳು ಬಂದು ಗೌರವ ಸಲ್ಲಿಸಿದರು. ಒಂದು ಮೋಟಾರ್ ಮೇಲೆ ರಥ ಕಟ್ಟಿ ರಥದ

ಮೇಲೆ ಅಸ್ತಿ ಕುಂಭವಿದ್ದ ಪಾಲ್ಕಿಯನ್ನಿಟ್ಟರು. ರಥವನ್ನು ಪೂರ್ಣ ಹೂವಮಾಲೆಯಿಂದ ಅಲಂಕರಿಸಿದ್ದರು. ಅಲಹಾಬಾದ್ ಸ್ಟೇಷನಿನಿಂದ ತ್ರಿವೇಣಿ ಸಂಗಮಕ್ಕೆ ೫-೬ ಮೈಲಿಯಾಗುತ್ತೆ. ದಾರಿಯ ಎರಡು ಕಡೆಯೂ ಕಂಬಗಳನ್ನು ನೆಟ್ಟು, ಬೊಂಬುಗಳನ್ನು ಕಟ್ಟಿ ಜನ ನುಗ್ಗದಂತೆ ತಡೆದಿದ್ದರು. ಮುಂದೆ ಆರ್ಮರ್ಡ್ ಕಾರ್, ಕುದುರೆಸೈನ್ಯ, ಅನಂತರ ರೈಫಲ್ ಪದಾತಿಗಳು. ಎರಡು ಕಡೆಯೂ ನಾಲ್ಕು ನಾಲ್ಕು ಜನರ ಸಾಲಿನ ಸೈನ್ಯ. ಮಧ್ಯೆ ಮುಂದೆ ದೇವದಾಸ್ ಗಾಂಧಿ ಮತ್ತು ಆಶ್ರಮದ ಜನರು ಮತ್ತು ದೆಹಲಿಯಿಂದ ಹೋದ ನಾವು. ನಮ್ಮ ಹಿಂದೆ ಅಲಹಾಬಾದಿನ ಕೆಲವು ಪ್ರಮುಖರು. ಅವರ ಹಿಂದೆ ರಥ. ಅವರ ಹಿಂದೆ ಪುನಃ ಸೈನ್ಯ. ದಾರಿಯುದ್ದಕ್ಕೂ ಎರಡು ಕಡೆಯೂ ಎಳ್ಳು ಹಾಕಲು ಸಾಧ್ಯವಿಲ್ಲದಷ್ಟು ಜನ "ರಘುಪತಿ ರಾಘವ ರಾಜಾರಾಂ, ಪತಿತಪಾವನ ಸೀತಾರಾಂ. ಈಶ್ವರ ಅಲ್ಲಾ ತೇರಾ ನಾಂ, ಸಬ್‌ಕೋ ಸನ್ಮತಿ ದೇ ಭಗವಾನ್" ಇದರ ವಿನಹ ಬೇರೊಂದು ಶಬ್ದವಿಲ್ಲ. ರೈಲ್ವೆ ಸ್ಟೇಷನಿನಿಂದ ೩-೪ ಫರ್ಲಾಂಗ್‌ನಲ್ಲಿ, ಒಂದು ದೊಡ್ಡ ಚರ್ಚ ಇದೆ. ಮೆರವಣಿಗೆ ಅಲ್ಲಿಗೆ ಬರುವ ಹೊತ್ತಿಗೆ ಸರಿಯಾಗಿ ಪ್ರಾರ್ಥನೆ ಮಾಡುತ್ತಿದ್ದರು. ಪ್ರಾರ್ಥನೆ ಬಹಳ ಗಂಭೀರವಾಗಿತ್ತು. ತ್ರಿವೇಣಿ ಸಂಗಮ ಸೇರುವ ಹೊತ್ತಿಗೆ ೧೨-೪೫. ಸಂಗಮದಿಂದ ೨ ಮೈಲಿ ಈಚೆಗೇನೆ ಕುಂಭಮೇಳ ಯಾತ್ರಿಕರ ಬಿಡಾರ ಆರಂಭವಾಗುತ್ತದೆ. ಪ್ರಯಾಗದಲ್ಲಿ ೧೨ ವರ್ಷಕ್ಕೊಮ್ಮೆ ಕುಂಭಮೇಳ ಯಾತ್ರೆ. ೯ನೇ ತಾರೀಖಿನ ದಿನ ಮಾಘಸ್ನಾನ. ಆ ಯಾತ್ರಿಕರೆ ೮-೧೦ ಲಕ್ಷ ಜನ ಸೇರಿದ್ದರು. ಜತೆಗೆ 'ಗಾಂಧೀಜಿ'ಯ ಅಸ್ತಿಯ ಅಂತಿಮ ಯಾತ್ರೆ ನೋಡಲು ಬಂದವರು ಸುಮಾರು ೫೦ ಲಕ್ಷ ಜನ ಇದ್ದರು ಎಂದು ಅಂದಾಜು ಮಾಡುತ್ತಾರೆ. ಸಂಗಮದ ಬಳಿ ಹೋದ ಒಡನೆ ಒಂದು ಮೋಟಾರ್ ದೋಣಿಯ ಮೇಲೆ ಕುಂಭವನ್ನು ಇಟ್ಟರು. ನಿಧಾನವಾಗಿ ಆ ದೋಣಿ ನದಿಯೊಳಕ್ಕೆ ಇಳಿಯಿತು. ನಮ್ಮ ಈ ಪುಣ್ಯಭೂಮಿಯಲ್ಲಿ ಅವತಾರಪುರುಷರು, ಧರ್ಮಸಂಸ್ಥಾಪಕರು, ಆಚಾರ್ಯಪುರುಷ, ಚಕ್ರವರ್ತಿ

ಗಳು ಎಷ್ಟೋ ಜನ ಆಗಿಹೋದರು—ಇತರ ದೇಶಗಳಲ್ಲೂ ಆಗಿದ್ದಾರೆ. ಆದರೂ ಪ್ರಪಂಚದ ಇತಿಹಾಸದಲ್ಲಿ ಯಾವ ಒಬ್ಬ ಮಹಾವ್ಯಕ್ತಿಯೇ ತನ್ನ ಜೀವಮಾನದಲ್ಲಿ ಗಾಂಧೀಜಿಯಷ್ಟು ವಿಶ್ವಪ್ರೇಮವನ್ನು, ಖ್ಯಾತಿ ಯನ್ನು ಗಳಿಸಲಿಲ್ಲ. ಇನ್ನಂತೂ ಅವರ ಖ್ಯಾತಿಯು ನೂರ್ಮಡಿಯಾಗಿ ಬೆಳೆಯುತ್ತೆಂಬುದರಲ್ಲಿ ಸಂದೇಹವಿಲ್ಲ. ಈ ಯುದ್ಧತಪ್ತ ಪ್ರಪಂಚದಲ್ಲಿ ಗಾಂಧೀಜಿಯೊಬ್ಬರೇ ಹಿಮಾಚಲ ಪರ್ವತದಂತೆ ಶಾಂತಿ-ಪ್ರೇಮ ಸಂದೇಶ ಸಾರಿದರು. ಇನ್ನಾದರೂ ಒಂದು ಹೊಸ ಯುಗ ಆರಂಭವಾಗಿ ದೇಶದಲ್ಲಿ—ಶಾಂತಿ, ಸ್ನೇಹ, ಭ್ರಾತೃತ್ವ ನೆಲಸುತ್ತದೆಯೋ ಏನೋ ನೋಡಬೇಕು.

ಆಮೇಲೆ ನಾನು ಒಂದು ದೋಣಿಯಲ್ಲಿ ಹೋಗಿ, ತ್ರಿವೇಣಿ ಸಂಗಮದಲ್ಲಿ ಸ್ನಾನಮಾಡಿ, ಅರ್ಘ್ಯ ಕೊಟ್ಟು ಹಿಂದಿರುಗಿದೆ. ರಾತ್ರಿ ೮-೩೦ಗೆ ಅಲಹಾಬಾದ್ ಬಿಟ್ಟು ನಿನ್ನೆ ೧೧ ಗಂಟೆಗೆ ದೆಹಲಿಗೆ ಬಂದೆ.

೧೯-೨-೪೮

ನೀನು ಬರೆದ ಎರಡೂ ಕಾಗದಗಳು ಬಂದವು. ಆರೋಗ್ಯದಿಂದ ಇದ್ದೇನೆ. ನಾನು ಪ್ರಯಾಗಕ್ಕೆ ಹೋದನಂತರ ಬರೆದ ಕಾಗದ ತಲ್ಪಿರ ಬೇಕಲ್ಲವೆ. ಮಹಾತ್ಮರ ಅಸ್ಥಿಯನ್ನು ಶಿವಮೊಗ್ಗ ಜಿಲ್ಲೆಗೂ ಸ್ವಲ್ಪ ಕೊಟ್ಟದ್ದು ಕೇಳಿ ತುಂಬ ಸಂತೋಷ. ನೀವೆಲ್ಲ ಹೋಗಿ ಆ ಪುಣ್ಯ ಕಾರ್ಯದಲ್ಲಿ ಭಾಗಿಗಳಾಗಿದ್ದೀರಿ ಎಂದು ಕೇಳಿ ಇನ್ನೂ ಸಂತೋಷ. ಆದರೆ ಮಹಾತ್ಮರಿಗೆ ತೃಪ್ತಿಯಾಗಬೇಕಾದರೆ ಪ್ರಪಂಚಕ್ಕೆಲ್ಲ ಗೊತ್ತಾಗುವಂಥ ಒಂದು ಸ್ಮಾರಕ ನಾವು ಕಟ್ಟಬೇಕಾದರೆ—ಮೂರ್ತಿಪೂಜೆಯಿಂದಲ್ಲ, ಮೃತ್ತಿಕೆ ಅಥವ ಹೂವಿನ ಪೂಜೆಯಿಂದಲ್ಲ—ಅದು ನಮ್ಮ ಹೃದಯ ಬಾಗಿಲನ್ನು ತೆರೆಯಲು, ಅಲ್ಲಿರುವ ಕತ್ತಲೆಯನ್ನು ಓಡಿಸಿ ಜ್ಞಾನದ ಬೆಳಕು ಮತ್ತು ಶುದ್ಧ ಭಾವನೆಯ ಗಾಳಿಯನ್ನು ತುಂಬಲು ಒಂದು ದೀವಿಗೆ ಮಾತ್ರ—ಒಂದು ಸಂಕೇತ. ಆದರೆ ಈಗ ನಾವು ಆ ಸಂಕೇತ ದಿಂದಲೇ ತೃಪ್ತರಾಗುತ್ತಿದ್ದೇವೆ. ಮೊದಲ ಹೆಜ್ಜೆಯನ್ನೇ ನಮ್ಮ ಗುರಿಯೆಂದು ಅಲ್ಲಿಯೇ ಕೈಮುಗಿದು ಕುಳಿತುಕೊಳ್ಳುತ್ತೇವೆ. ಹಾಗೆ

ಮಾಡದೆ ಗಾಂಧೀಜಿಯವರು ಏನು ನುಡಿದು—ನುಡಿದಂತೆ ನಡೆದು —ಜಗತ್ತಿಗೆ ಮಾರ್ಗದರ್ಶಕರಾದರು ? ಆ ದಾರಿಯಲ್ಲಿ ಅವರಷ್ಟು ದೂರ ಅಲ್ಲದಿದ್ದರೂ, ಸ್ವಲ್ಪ ನಾಲ್ಕು ಹೆಜ್ಜೆಯಾದರೂ ನಡೆದರೆ, ಇಡೀ ಜನಾಂಗವೇ ಅವರಂತೆ ನಡೆದರೆ—ಅದೇ ಅವರಿಗೆ ದೊಡ್ಡ ಸ್ಮಾರಕ! ಸಾಯುವ ಮುಂಚೆಯೇ ಅವರು ಹೇಳಿದ್ದರು : " ನನ್ನ ಪ್ರತಿಮೆಗಳನ್ನು ನಿಲ್ಲಿಸಬೇಡಿ. ದೇವಸ್ಥಾನಗಳನ್ನು ಕಟ್ಟಬೇಡಿ, ಸ್ಮಾರಕಗಳನ್ನು ಕಟ್ಟಬೇಡಿ " ಎಂದು. ಆದರೆ ಈ ಮೂರ್ತಿಪೂಜೆ ನಮ್ಮಲ್ಲಿ ಎಷ್ಟು ಬೇರೂರಿದೆ ಎಂದರೆ—ಈಗಾಗಲೇ ಎಲ್ಲೆಲ್ಲೂ ಪ್ರತಿಮೆಗಳನ್ನು ನಿಲ್ಲಿಸುವ ಕೆಲಸ ಆರಂಭವಾಗಿದೆ. ಬೊಂಬಾಯಿನಲ್ಲಿ ೭೦ ಲಕ್ಷ ಖರ್ಚು ಮಾಡಬೇಕೆಂದಿದ್ದಾರಂತೆ! ಏನು ಹುಚ್ಚುತನ! ಯಾವಾತನೋ ಒಬ್ಬ ಪುಣ್ಯಾತ್ಮ —ಅವರಿರುವಾಗಲೇ ಒಂದು ದೇವಸ್ಥಾನ ಕಟ್ಟಿ ಪೂಜೆಗಾರಂಭಿಸಿದ್ದ. ಅವರು ನುಡಿದು, ನಮಗೆ ಬಿಟ್ಟಿರುವ ಅವರ ಅಮೃತವಾಣಿಯನ್ನು ಹೃದ್ಗತಮಾಡಿಕೊಂಡು ಅನುಷ್ಠಾನಕ್ಕೆ ತರುವುದೇ ಅವರಿಗೆ ಮನ ಮೆಚ್ಚಿನ ಸ್ಮಾರಕ! ಹಾಗಾದರೆ ನೀವೆಲ್ಲರೂ ಒಬ್ಬೊಬ್ಬರೂ ದಿನಕ್ಕೆ ಅರ್ಧ ಗಂಟೆಯಾದರೂ ದಾರ ತೆಗೆಯುತ್ತೀರೇನು ? ಬಹಳ ಸುಲಭದ ಕೆಲಸ. ಯಾರಿಗೂ ಹೇಳದೆ, ಯಾರ ಸಹಾಯವನ್ನು ಕೋರದೆ, ನಮ್ಮಷ್ಟಕ್ಕೆ ನಾವೇ ಮಾಡುವ ಕೆಲಸ ನೋಡೋಣ ನಾನು ಬರುವ ಹೊತ್ತಿಗೆ ಎಷ್ಟು ದಾರ ತೆಗೆದಿರುತ್ತೀರಿ! ಗಾಂಧೀಜಿ ರಾಮನಾಮ ಸ್ಮರಣೆ ಎಂದರೆ ಸರ್ವೌಷಧವೆಂದು ತಿಳಿದಿದ್ದರು. ದಿನವೂ ಮಲಗುವ ಮುಂಚೆ ಅಥವ ಸಂಜೆ ಎಲ್ಲರೂ ಸೇರಿ ರಾಮ ಸ್ಮರಣೆ ಮಾಡುತ್ತೀರೇನು?

ಮೃತ್ತಿಕೆ ೨-೩ ಚಮಚದಷ್ಟು ಮಾತ್ರ ಇದೆ. ಈಗ ಅಲ್ಲಿ ಮಿಲಿಟರಿ ಕಾವಲು! ಏಕೆಂದರೆ ಈಗಾಗಲೇ ಒಂದು ಮೊಳದ ಉದ್ದ ಗುಂಡಿ ಬಿದ್ದಿದೆ. ಆದ್ದರಿಂದ ಮೃತ್ತಿಕೆಯು ಪುನಃ ದೊರೆಯಲಾರದು. ನೋಡೋಣ. ಇನ್ನಷ್ಟು ಹೂವು ಇದೆ. ಅಸ್ತಿ ಸ್ಪೇಷಲ್‌ನಲ್ಲಿ ಮಾಡಿದ ಸೂತ್ರಯಜ್ಞದ ಒಂದು ಅಡಿ ದಾರ ತೆಗೆದು ಇಟ್ಟುಕೊಂಡಿದ್ದೇನೆ. ಬರುವಾಗ ತರುತ್ತೇನೆ. ಹೋಳಿ ಹುಣ್ಣಿಮೆಯ ಹೊತ್ತಿಗೆ ಒಂದು

ವಾರ ಊರಿಗೆ ಬಂದು ಹೋಗೋಣವೆಂದಿರುತ್ತೇನೆ. ಆಗ ಒಂದು ವಾರ ನಮಗೆ ಬಿಡುವು ಇದೆ. ನೆನ್ನೆಯ ದಿನ ಕಾಂಗ್ರೆಸ್ ಅಸೆಂಬ್ಲಿ ಪಾರ್ಟಿ ಮೀಟಿಂಗ್ ಆಯಿತು. ಶ್ರೀ ಗೋಪಾಲಸ್ವಾಮಿ ಅಯಂಗಾರ್, ಷೇಕ್ ಅಬ್ದುಲ್ಲಾ, ಮೋತಿಲಾಲ್, ಚಿಮನಲಾಲ್ ಸೆಟಲ್‌ವಾಡ್—ಲೇಕಸಕ್ಸೆಸ್‌ಸಿಂದ ಕಾಶ್ಮೀರದ ವಿಷಯದಲ್ಲಿ ಇಂಡಿಯ ಸರ್ಕಾರದ ಸಲಹೆ ಕೇಳಲು ಬಂದಿದ್ದವರು ಪಾರ್ಟಿ ಸಭೆಯಲ್ಲಿ ಭಾಷಣ ಮಾಡಿದರು. ಅವರ ಭಾಷಣ ಕೇಳಿದರೆ ಸೆಕ್ಯೂರಿಟಿ ಕೌನ್ಸಿಲ್‌ನಿಂದಾಗಲಿ ಯು. ಎನ್. ಓ. ದಿಂದ ಆಗಲಿ ಪ್ರಪಂಚಕ್ಕೆ ನ್ಯಾಯವಾಗಲಿ ಶಾಂತಿಯಾಗಲಿ ದೊರೆಯುವಂತೆ ತೋರುವುದಿಲ್ಲ. ಅದೂ ಒಂದು ಚರ್ಚಾಕೂಟ—ಬಲಿಷ್ಠರ ರಾಜಕೀಯ. ಸೆಕ್ಯೂರಿಟಿ ಕೌನ್ಸಿಲ್‌ನಲ್ಲಿ ಹನ್ನೊಂದು ಜನ ಸದಸ್ಯರು. ೫ ಜನ ಕಾಯಂ ಸದಸ್ಯರಾದ ಪ್ರಬಲರಾಷ್ಟ್ರಗಳು—ಅಮೇರಿಕ ಸಂಯುಕ್ತ ಸಂಸ್ಥಾನಗಳು, ಬ್ರಿಟನ್, ರಷ್ಯ, ಚೀನಾ ಮತ್ತು ಫ್ರಾನ್ಸ್. ಇನ್ನುಳಿದ ಆರು ಚುನಾಯಿತ ರಾಷ್ಟ್ರಗಳು. ಇವುಗಳಲ್ಲಿ ರಷ್ಯ, ಯುಕ್ರೇನ್ ಒಂದು ಕಡೆ—ಉಳಿದವೆಲ್ಲ ಅಮೇರಿಕ ಇಂಗ್ಲೆಂಡ್ ಕಡೆ. ಯಾವುದನ್ನೂ ನ್ಯಾಯದೃಷ್ಟಿಯಿಂದ ಪರಿಶೀಲಿಸುವುದಿಲ್ಲ. ಇಂಗ್ಲೆಂಡ್ ಅಮೇರಿಕ ಒಂದು ಕಡೆ ಎಳೆದರೆ ರಷ್ಯ ಇನ್ನೊಂದು ಕಡೆ ಎಳೆಯಲೇಬೇಕು. ರಷ್ಯ ಒಂದು ಕಡೆ ಒಲುಮೆ ತೋರಿಸಿದರೆ ಇಂಗ್ಲೆಂಡ್ ಅಮೇರಿಕ ಇನ್ನೊಂದು ಕಡೆ ಎಳೆಯಲೇಬೇಕು. ಅದಕ್ಕೆ ಕಾರಣ ಇಷ್ಟೇ—ಅದರಲ್ಲೇನೋ ಒಂದು ರಾಜಕೀಯ ರಹಸ್ಯವೊ, ಆರ್ಥಿಕ ರಹಸ್ಯವೊ ಇದೆ ಎಂಬ ಪರಸ್ಪರ ಸಂಶಯ.

ಈ ರಾಜಕೀಯ ಪ್ರಬಲ ಶಕ್ತಿಗಳ ಮಧ್ಯೆ ಇಂಡಿಯಾ ಯಾರ ಪಕ್ಷವನ್ನೂ ವಹಿಸುವಂತೆ ಇಲ್ಲ. ನಮಗೆ ಸ್ವಾತಂತ್ರ್ಯ ಬಂದು ಏಳೂವರೆ ತಿಂಗಳು ಮಾತ್ರ ಆಗಿದೆ. ಯಾರೊಡನೆ ಸೇರಿದರೂ ಕಷ್ಟ. ರಷ್ಯದ ಗಡಿ ಕಾಶ್ಮೀರದ ಉತ್ತರಕ್ಕೆ ಅಂಟಿಕೊಂಡಿದೆ. ಉಳಿದ ಕಡೆಯಲ್ಲಿ ಎಲ್ಲ ಅಮೇರಿಕ ಇಂಗ್ಲೆಂಡ್ ರಾಷ್ಟ್ರಗಳ ರಾಜಕೀಯ ಆರ್ಥಿಕ ಶಕ್ತಿಯ ಪ್ರಭಾವಕ್ಕೆ ಒಳಗಾದ ದೇಶಗಳಿವೆ. ಯಾವ ರಾಜಕೀಯಕ್ಕೂ

ಅಂಟಿಕೊಳ್ಳದೆ ಎಲ್ಲವನ್ನೂ ಆದರದರ ವಾಸ್ತವಿಕ ಸತ್ಯದ ಮತ್ತು ತತ್ವದ ಮೇಲೆ, ನ್ಯಾಯ ಯಾವ ಕಡೆ ಇದೆಯೋ ಅದರಂತೆ ತೀರ್ಮಾನಿಸಬೇಕು ಎಂದು ಇಂಡಿಯದ ಮತ. ಈ ಏಳೂವರೆ ತಿಂಗಳಲ್ಲಿ ಪ್ಯಾಲೆಸ್ಟೈನ್, ಗ್ರೀಸ್, ಕೋರಿಯ ಪ್ರಶ್ನೆಗಳ ಮೇಲೆ ಇಂಡಿಯ ಅದೇ ಮಾರ್ಗವನ್ನನುಸರಿಸಿತು. ಇದರಿಂದ 'ಇಂಡಿಯ' ಕಂಡರೆ ಅಮೇರಿಕ ಇಂಗ್ಲೇಂಡ್‌ಗಳಿಗೂ ಸಂಶಯ—ರಷ್ಯಕ್ಕೂ ಸಂಶಯ. ಅಲ್ಲದೆ ಪ್ಯಾಲೆಸ್ಟೈನ್ ವಿಷಯದಲ್ಲಿ ಅಮೇರಿಕ ಇಂಗ್ಲೆಂಡ್ ಅರಬ್ಬೀ ಜನರಿಗೆ ಅನ್ಯಾಯಮಾಡಿ ಮುಸ್ಲಿಮರ ದ್ವೇಷವನ್ನು ಕಟ್ಟಿಕೊಂಡಿದ್ದಾರೆ. ಇಲ್ಲಿಯಾದರೂ ಅವರನ್ನು ಸ್ವಲ್ಪ ಒಲಿಸಿಕೊಳ್ಳೋಣ ಎಂಬ ಮನೋಭಾವ. ಇನ್ನೊಂದು ಕಾರಣ ರಷ್ಯದ ಭಯ. ಅಮೇರಿಕ ಇಂಗ್ಲೆಂಡ್‌ಗಳಿಗೆ ಇರಾಕ್ ಇರಾಣ ದೇಶಗಳಲ್ಲಿ ಎಣ್ಣೆಗಣಿಗಳ ಸ್ವಾಮ್ಯವಿದೆ. ಅಮೇರಿಕ ಇಂಗ್ಲೆಂಡ್‌ಗಳಿಗೂ ರಷ್ಯಕ್ಕೂ ಪುನಃ ಯುದ್ಧವಾದರೆ ಇಂಡಿಯ ತಮ್ಮ ಕಡೆ ಸೇರದಿರಬಹುದು; ಆದ್ದರಿಂದ ರಷ್ಯಕ್ಕೂ ತಮಗೂ ಮಧ್ಯೆ ಪ್ರಬಲವಾದ ಮುಸ್ಲಿಂ ರಾಷ್ಟ್ರಗಳ ಗುಂಪು ಬರದಿರಲಿ ಎಂಬ ಭಾವನೆ ಇರಬಹುದು. ಮತ್ತೊಂದು ಕಾರಣ—ಇಂಡಿಯಾದಿಂದ ಬ್ರಿಟಿಷರನ್ನೆಲ್ಲ ಓಡಿಸಲಾಗುತ್ತಿದೆ—ಇನ್ನುಳಿದಿರುವವರು ಸ್ವಲ್ಪ ಜನ ಮಾತ್ರ. ಆದರೆ ಪಾಕಿಸ್ಥಾನದಲ್ಲಿ ತುಂಬ ಇಂಗ್ಲಿಷ್ ಅಧಿಕಾರಿಗಳು ಇದ್ದಾರೆ. ಅವರಿಗೆ ಕಾರ್ಖಾನೆಗಳನ್ನು ಸ್ಥಾಪಿಸುವದರಲ್ಲಿ, ಸೈನ್ಯದಲ್ಲಿ, ಪೋಲೀಸ್ ನೌಕರಿಗಳಲ್ಲಿ ಹೆಚ್ಚು ಸೌಲಭ್ಯಗಳನ್ನು ಕೊಡಲಾಗುತ್ತಿದೆ. ಈ ಮೂಲಕವೂ ಪಾಕಿಸ್ಥಾನವನ್ನು ಒಲಿಸಿಕೊಂಡರೆ ತಮ್ಮ ಹತೋಟಿಯನ್ನು ಇಟ್ಟುಕೊಳ್ಳಬಹುದೆಂಬ ಆಸೆ ಬೇರೆ ಇರಬಹುದು. ಏನಾದರೂ ನೆಪಹಾಕಿ, ಇಂಡಿಯಾ ಪಾಕಿಸ್ಥಾನಗಳ ವೈಮನಸ್ಸಿನ ನೆಪದಿಂದ, ಅಂತರ ರಾಷ್ಟ್ರೀಯ ಶಾಂತಿಯ ನೆಪದಿಂದ, ಒಂದಲ್ಲ ಒಂದು ವಿಧದಿಂದ ಇಂಡಿಯದ ಮೇಲೆ ಸ್ವಾಮ್ಯವನ್ನು ಪಡೆಯಬೇಕೆಂದು ಇಂಗ್ಲೆಂಡಿನ ಆಸೆ ಇರಬಹುದು. ಈ ಎಲ್ಲ ಕಾರಣಗಳಿಂದ 'ಕಾಶ್ಮೀರ'ದ ಪ್ರಶ್ನೆ ಬಹಳ ತೊಡಕಾಗಿದೆ. "ನಮ್ಮ ಕಾರ್ಯ ಬಹಳ ಸುಲಭ. ಸತ್ಯ, ನ್ಯಾಯ ನಮ್ಮ ಕಡೆಗೆ ಇವೆ" ಎಂದು ಅಂತರ

ರಾಷ್ಟ್ರೀಯ ಸಂಸ್ಥೆಯಲ್ಲಿ ಬಹಳ ನಂಬಿಕೆಯನ್ನಿಟ್ಟು ಹೋದ ಇಂಡಿಯಕ್ಕೆ ಬಹಳ ನಿರಾಶೆಯಾಗಿದೆ. ಇಂದಿನ ಯು. ಎನ್. ಓ. ಸೆಕ್ಯೂರಿಟಿ ಕೌನ್ಸಿಲ್ ಹಿಂದಿನ ಲೀಗ್ ಆಫ್ ನೇಷನ್ಸ್ ದಾರಿಯನ್ನೇ ಹಿಡಿದಿದೆ. ಇದುವರೆಗೆ ಕೋರಿಯ, ಗ್ರೀಸ್, ಇಂಡೊನೇಷಿಯ, ದಕ್ಷಿಣ ಆಫ್ರಿಕ ಈ ನಾಲ್ಕೈದು ಕಡೆ ಕೊಟ್ಟ ತೀರ್ಮಾನವನ್ನು ಅದಕ್ಕೆ ಸಂಬಂಧ ಪಟ್ಟ ರಾಷ್ಟ್ರಗಳು ಪಾಲಿಸಿಲ್ಲ. ಆ ತೀರ್ಮಾನವನ್ನು ಆ ರಾಷ್ಟ್ರಗಳ ಮೇಲೆ ಒತ್ತಾಯದಿಂದ ಆಚರಿಸುವಂತೆ ಸೆಕ್ಯೂರಿಟಿ ಕೌನ್ಸಿಲ್ ಯಾವ ಕಾರ್ಯ ಕ್ರಮವನ್ನೂ ತೆಗೆದುಕೊಂಡಿಲ್ಲ. ಅಲ್ಲಿ ಒಬ್ಬೊಬ್ಬರೂ ಏನು ಬೇಕಾದರೂ ಮಾತನಾಡಬಹುದು. ಹಾವಾಡಿಗರಾಟ—ಹಗ್ಗದ ಮೇಲೆ ಕುಣಿಯುವುದು —ಪ್ರಾಚೀನ ಇತಿಹಾಸ—ಏನು ವಿಷಯವಾದರೂ ಸರಿ. ಮಧ್ಯೆ ಇನ್ನೊಬ್ಬರು ಮಾತನಾಡಿ ತಪ್ಪು ಹೇಳುತ್ತಿದಾರೆಂದು ಹೇಳುವಂತಿಲ್ಲ. ಅದನ್ನು ಉತ್ತರ ಹೇಳುವಾಗಲೇ ಹೇಳಬೇಕು. ಅಷ್ಟು ಹೊತ್ತಿಗೆ ಒಂದು ವಾರವಾದರೂ ಕಳೆದಿರುತ್ತೆ—ಆ ವಿಷಯವನ್ನೇ ಎಲ್ಲರೂ ಮರೆತಿರುತ್ತಾರೆ. ಸೆಕ್ಯೂರಿಟಿ ಕೌನ್ಸಿಲ್ ಸಭೆಯು ಯಾವ ನಿರ್ಣಯ ವನ್ನೂ ಮಾಡುವುದಿಲ್ಲ. ಯಾವ ತೀರ್ಮಾನಕ್ಕೂ ಬರುವುದಿಲ್ಲ. ಅದೊಂದು ತಮಾಷೆ—ನಾಟಕ! ಹೆಸರು ಮಾತ್ರ ದೊಡ್ಡದು. ಇದರಿಂದ ನ್ಯಾಯವೆಲ್ಲಿ—ಪ್ರಪಂಚಕ್ಕೆ ಶಾಂತಿ ಎಲ್ಲಿ?

ಈಗ ಮಹಾತ್ಮರು ಇದ್ದಿದ್ದರೆ ಏನು ಹೇಳುತ್ತಿದ್ದರೊ? ಅಂತೂ ನಮ್ಮ ಮುಂದಿನ ಸಮಸ್ಯೆ ಬಹಳ ಕಷ್ಟವಿದೆ. ಇದೆಲ್ಲ ಅಂತರ ರಾಷ್ಟ್ರೀಯ ರಾಜಕೀಯ.

ಷೇಕ್ ಅಬ್ದುಲ್ಲಾರನ್ನು ನಾನು ನೋಡಿದ್ದು ಇದೇ ಮೊದಲು. ಒಳ್ಳೆಯ ಸಿಪಾಯಿ. ಒಳಗೊಂದು ಹೊರಗೊಂದು ಇದ್ದಂತೆ ತೋರು ವುದಿಲ್ಲ. ಮನಸ್ಸಿನಲ್ಲಿರುವುದನ್ನು ಬಿಚ್ಚಿಹೇಳುವ ಮನುಷ್ಯ. ಜಿನ್ನಾ ಮತ್ತು ಆತನ ಜನಾಂಗಗಳ ತತ್ವವನ್ನು ಕಂಡರೆ ಕೆಂಡದಷ್ಟು ಕೋಪ. ಕಾಶ್ಮೀರದ ಜನ ಆತನನ್ನು ಕಾಶ್ಮೀರದ ಸಿಂಹ ಎಂದು ಕರೆಯುತ್ತಾರೆ.

೧೯-೨-೪೮

ನಿನ್ನ ಕಾಗದ ತಲ್ಪಿದೆ. ದೇವದಾಸ್ ಗಾಂಧಿಯವರಿಗೆ ಮೂರು ವರ್ಷದ ಮಗ ಗೋಪು ಎಂತ ಇದ್ದಾರೆ. ನಾನು ಪ್ರಯಾಗಕ್ಕೆ ಹೊರಟ ಗಾಡಿಯಲ್ಲಿ ಅವನೂ ಮಲಗಿದ್ದ. ಘಾಜಿಯಾಬಾದಿನಲ್ಲಿ ಜನ ಬಂದು "ಮಹಾತ್ಮಾ ಗಾಂಧೀಕಿ ಜೈ" ಎಂದು ಕೂಗಿದಾಗ ಎಚ್ಚರ ವಾಗಿ "ಬಾಪೂ ಮತ್ತೆ ಬರುತ್ತಾರೇನು" ಎಂದು ಕೇಳಿದನಂತೆ.

ರೈಲು ಹೋಗುತ್ತಿರುವಾಗ—ಒಬ್ಬ ಹಳ್ಳಿಯ ಜಮೀನುದಾರ ಇರಬಹುದು—ಒಂದು ಆನೆಯ ಮೇಲೆ ಗಾಂಧೀಜಿಯ ಅಸ್ತಿಯನ್ನು ನೋಡಲು ಬಂದಿದ್ದ. ರೈಲು ಹೋಗುವಾಗ ಆನೆ ತನ್ನ ಸೊಂಡಿಲನ್ನು ಮೇಲಕ್ಕೆ ಎತ್ತಿ ಗಾಡಿಗೆ ನಮಸ್ಕಾರ ಮಾಡಿತು.

ಒಂದು ಸ್ಕೂಲಿನಿಂದ ಪುಟ್ಟ ಪುಟ್ಟ ಹುಡುಗರು ಓಡಿ ಬಂದರು. ರೈಲು ಬಹಳ ವೇಗದಿಂದ ಓಡುತ್ತಿತ್ತು. ಅವರ ಪುಟ್ಟ ಕಾಲುಗಳಿಗೆ ಎಟುಕಲಿಲ್ಲ. ಅಲ್ಲೇ ನಿಂತು ಗಾಡಿ ಕಡೆ "ಮಹಾತ್ಮಾ ಗಾಂಧೀಕಿ ಜೈ" ಎಂದು ಕೂಗಿ, ಕೈಲಿದ್ದ ಹೂವನ್ನು ಗಾಡಿ ಕಡೆ ಎರಚಿದರು. ಸುಮಾರು ಮುನ್ನೂರು ಜನ ಹುಡುಗರಿದ್ದರು. ಆಗ ನನಗೆ ನಿನ್ನ ಜ್ಞಾಪಕ ಬಂತು.

---

## ಕುರುಕ್ಷೇತ್ರ ನಿರಾಶ್ರಿತರ ಶಿಬಿರ

ದಿಲ್ಲಿಗೆ ಬಂದಾಗಿನಿಂದ ಕುರುಕ್ಷೇತ್ರವನ್ನು ನೋಡಬೇಕೆಂಬ ಹಂಬಲು ಬಹಳ ಇತ್ತು. ಕುರುಕ್ಷೇತವೆಂದೊಡನೆ—ಮಹಾಭಾರತದ ಕಥೆ, ಪಾಂಡವಕೌರವರ ೧೮ ಅಕ್ಷೋಹಿಣೀ ಸೇನೆ, ಬಿಲ್ಲುಗಾರ ಅರ್ಜುನನಿಗೆ ಭಗವಾನ್ ಕೃಷ್ಣನ ಸಾರಥ್ಯ, ಅತಿರಥ ಮಹಾರಥರ ಶಂಖನಿನಾದ ಮತ್ತು "ಧರ್ಮಕ್ಷೇತ್ರೆ ಕುರುಕ್ಷೇತ್ರೆ ಸಮವೇತಾ ಯುಯುತ್ಸವಃ ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ" ಎಂಬ ಶ್ರೀಕೃಷ್ಣನ ಗೀತೆ—ಒಂದರಮೇಲೊಂದು ಅಲೆ ಅಲೆಯಾಗಿ ಮನಸ್ಸಿಗೆ ಬರುತ್ತವೆ. ದಾಯಾದಿ ಮತ್ಸರದ ದಾವಾಗ್ನಿಗೆ ಸಿಕ್ಕಿದ

ಜನತೆಗೆ ಅಂದು ಅದೊಂದು ರಣಭೂಮಿಯಾಯಿತು. ಸ್ವತಂತ್ರ ಭಾರತದ ಉದಯದಲ್ಲಿ ಕುರುಕ್ಷೇತ್ರ ಮತ್ತೊಮ್ಮೆ—ಇನ್ನೊಂದು ಬಗೆಯ ದಾಯಾದಿ ಮತ್ಸರದ—ಹಿಂದೂ ಮುಸ್ಲಿಂ ವೈರದ ಕೋಪಾಗ್ನಿಗೆ ಬಲಿಯಾದ ನಿರಾಶ್ರಿತರ ಶಿಬಿರವಾಗಿ—ಮತ್ತೊಂದು ರೀತಿಯ ರಣಭೂಮಿಯಾಗಿದೆ. ಆದ್ದರಿಂದ ಕುರುಕ್ಷೇತ್ರಕ್ಕೆ ಇಂದು ಹೆಚ್ಚಿನ ಮಹತ್ವ.

## ಹಿನ್ನೆಲೆ

೧೫-೮-೪೭ನೇ ದಿನ ಸ್ವಾತಂತ್ರ್ಯವನ್ನು ಪಡೆಯುತ್ತಲೇ ಭಾರತ ಇಬ್ಭಾಗವಾಯಿತು. ಪಂಜಾಬ ಎರಡು ಭಾಗವಾಗಿ—ಪೂರ್ವ ಭಾಗ ಭಾರತಕ್ಕೂ ಪಶ್ಚಿಮ ಭಾಗ ಪಾಕಿಸ್ಥಾನಕ್ಕೂ ಸೇರಿದವು. ಪಂಜಾಬ ಸರಕಾರ ಕುಸಿದುಬಿತ್ತು. ಪಶ್ಚಿಮ ಪಂಜಾಬಗಳಲ್ಲಿ ಮುಸ್ಲಿಮರೂ ಪೂರ್ವ ಪಂಜಾಬಿನಲ್ಲಿ ಶೀಖ, ಹಿಂದುಗಳು ತಮ್ಮ ಮಾನವೀಯತೆಯನ್ನು ಮರೆತು ಮಾಡಬಾರದ ಅತ್ಯಾಚಾರಗಳನ್ನು ಮಾಡಿದರು. ಮನೆಗಳಿಗೆ ಬೆಂಕಿ ಇಟ್ಟರು, ಲೂಟಿ ಮಾಡಿದರು, ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿದರು, ಮಕ್ಕಳು ಸ್ತ್ರೀಯರನ್ನ ಪಹರಿಸಿದರು. ಸಹಸ್ರಾರು ಜನರ ಕೊಲೆ ಕಣ್ಣುಮುಚ್ಚಿ ಕಣ್ಣು ತೆಗೆಯುವುದರೊಳಗೆ ನಡೆದುಹೋಯಿತು. ಜನ ದಿಕ್ಕು ತೋರದೆ ಪಶ್ಚಿಮ ಪಂಜಾಬಿನ ಹಿಂದೂ ಶೀಖರು ಪೂರ್ವ ಪಂಜಾಬಿಗೂ ಪೂರ್ವ ಪಂಜಾಬಿನ ಮುಸ್ಲಿಮರು ಪಶ್ಚಿಮ ಪಂಜಾಬ ಮತ್ತು ಪಾಕಿಸ್ಥಾನಕ್ಕೂ ಹೊರಳಲಾರಂಭಿಸಿದರು. ಈ ರೀತಿ ಪಾಕಿಸ್ಥಾನದಿಂದ ಹಿಂದುಸ್ತಾನಕ್ಕೆ ಬಂದ ನಿರಾಶ್ರಿತರ ಸಂಖ್ಯೆ ೪೦ ಲಕ್ಷ. ಈ ಪೈಕಿ ೨೫ ಲಕ್ಷ ಜನರು ಆಗಲೇ ಪೂರ್ವ ಪಂಜಾಬದ ಹಳ್ಳಿಗಳಲ್ಲಿ ಸೇರಿಕೊಂಡು ವ್ಯವಸಾಯದಿಂದ ಜೀವನ ನಡೆಸುತ್ತಿದ್ದಾರೆ. ಇನ್ನು ಳಿದವರು ಅಲ್ಲಲ್ಲಿ ನಿರಾಶ್ರಿತರ ಶಿಬಿರಗಳಲ್ಲಿ ಇದ್ದಾರೆ. ಅದರಲ್ಲಿ ಮುಖ್ಯ ಶಿಬಿರ ಕುರುಕ್ಷೇತ್ರ !

ಕುರುಕ್ಷೇತ್ರವು ದಿಲ್ಲಿಯಿಂದ ವಾಯುವ್ಯದಲ್ಲಿ ಒಂದು ನೂರು ಮೈಲು ದೂರದಲ್ಲಿದೆ. ಪುರಾತನ ದಿಲ್ಲಿಯ ಕಿಂಗ್ಸ್‌ವೇ ಶಿಬಿರದಲ್ಲೇ ಸುಮಾರು

೨೯೭೦೦ ಜನ ನಿರಾಶ್ರಿತರಿದ್ದಾರೆ. ಅನಂತರ ಪಾಣಿಪತ್ತದಲ್ಲಿ ಸುಮಾರು ೨೦೦೦೦, ಕರ್ನಾಲದಲ್ಲಿ ೨೫—೩೦೦೦೦, ಕುರುಕ್ಷೇತ್ರದಲ್ಲಿ ೧೭೦೦೦೦ ಇದ್ದಾರೆ! ಇವಲ್ಲದೆ ಅಂಬಾಲ, ಜಲಂಧರ, ಗುರ್ಗ್ಗಾಂವ, ಹರಿದ್ವಾರ ಮುಂತಾದ ನಗರಗಳಲ್ಲಿಯೂ ನಿರಾಶ್ರಿತರ ಶಿಬಿರಗಳಿವೆ.

ಅವುಗಳಲ್ಲೆಲ್ಲ ಕುರುಕ್ಷೇತ್ರವೇ ದೊಡ್ಡದು; ಎಲ್ಲಕ್ಕೂ ಮೊದಲು ಆರಂಭವಾದದ್ದು. ಕುರುಕ್ಷೇತ್ರದಲ್ಲಿ ಶಿಬಿರ ಸ್ಥಾಪಿಸಲು ಮುಖ್ಯ ಕಾರಣ ಅಲ್ಲಿನ ನೀರಿನ ಸೌಕರ್ಯ. ಕುರುಕ್ಷೇತ್ರದಲ್ಲಿ ಸೂರ್ಯಕುಂಡ ಎಂಬ ಸರೋವರವಿವೆ. ಮಹಾಭಾರತದ ಯುದ್ಧಾನಂತರ ಯುಧಿಷ್ಠಿರನು ಇಲ್ಲಿ ತನ್ನ ಪಿತೃಗಳಿಗೆ ತರ್ಪಣಕೊಟ್ಟನೆಂದು ಪ್ರತೀತಿ ಇದೆ. ಇದರ ಪಕ್ಕದಲ್ಲಿ ಸ್ವಲ್ಪ ದೂರದಲ್ಲಿ ಇನ್ನೊಂದು ಸರೋವರವಿದೆ. ಸಂಜೆ ಯುದ್ಧ ಮುಗಿದಾಗ ಪಾಂಡವರು ಕೌರವರು ಇಲ್ಲಿ ಬಂದು ವಿಶ್ರಮಿಸಿಕೊಳ್ಳು ತ್ತಿದ್ದರಂತೆ. ಆಗ ಯುದ್ಧವೂ ಒಂದು ನೀತಿಯ ಕಟ್ಟಿನಲ್ಲಿ ನಡೆಯುತ್ತಿತ್ತು. ಸುತ್ತಲೂ ಕಲ್ಲಿನ ಸೋಪಾನಗಳ ಮೇಲೆ ಗೀತಾ ಮಂದಿರ, ಜಗನ್ನಾಥನ ದೇವಾಲಯ ಇವೆ. ಸರೋವರದ ಮಧ್ಯೆ ಒಂದು ಪೂಲಿನ ರಸ್ತೆ. ಸರೋವರದಲ್ಲಿ ಶಾಶ್ವತ ಚಿಲುಮೆಗಳಿವೆ ಯಂತೆ. ಗ್ರಹಣಕಾಲದಲ್ಲಿ ಸೂರ್ಯಕುಂಡದಲ್ಲಿ ಸ್ನಾನಮಾಡಲು ಪ್ರತಿ ವರ್ಷ ದೊಡ್ಡ ಜಾತ್ರೆ ಸೇರುತ್ತದೆ. ಸುಮಾರು ೧೦ ಲಕ್ಷ ಜನ ಸೇರುವರಂತೆ. ಈ ಜಾತ್ರೆ ಒಂದು ವಾರ ನಡೆಯುತ್ತದೆ. ಯಾತ್ರಿಕರ ಅನುಕೂಲತೆಗೆಂದು ಸರಕಾರದವರು ಪಂಪ್ ಇಟ್ಟು, ನೀರಿನ ಕೊಳಾಯಿ ಗಳನ್ನು ಕಟ್ಟಿ, ನೀರಿನ ಸೌಕರ್ಯ ಒದಗಿಸಿದ್ದಾರೆ. ಸುತ್ತಲೂ ದೊಡ್ಡ ಮೈದಾನ. ಹತ್ತಿರವೇ ರೈಲು ನಿಲ್ದಾಣ.

ಕುರುಕ್ಷೇತ್ರದಿಂದ ಸುಮಾರು ೪ ಮೈಲು ದೂರದಲ್ಲಿ ಜ್ಯೋತಿಸರ ಹಳ್ಳಿಯಿದೆ. ಅಲ್ಲಿಯೇ ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಗೀತೆ ಯನ್ನು ಬೋಧಿಸಿದನಂತೆ. ಅಲ್ಲಿ ಗೀತಾಮಂದಿರ ಎಂದು ಎರಡು ಸಣ್ಣ ಗುಡಿಗಳಿವೆ—ಒಂದು ಹೊಸದು, ಒಂದು ಹಳೆಯದು. ಎರಡರಲ್ಲಿಯೂ ಅಮೃತಶಿಲೆಯ ಕೃಷ್ಣಸಾರಥಿ ವಿಗ್ರಹಗಳಿವೆ. ಪಕ್ಕದಲ್ಲಿಯೇ ಒಂದು

ಸಣ್ಣ ಕೊಳ, ದೇವಸ್ಥಾನದ ಹಿಂದೆ ಒಂದು ಸಣ್ಣ ದಿನ್ನೆ—ಅದರ ಮೇಲೂ ಒಂದು ಸಣ್ಣ ಗುಡಿ. ಮಧ್ಯೆ ದಾರಿಯಲ್ಲಿ ಥಾನೇಶ್ವರ ನಗರ ಸಿಗುತ್ತದೆ. ಥಾನೇಶ್ವರ ಯುದ್ಧ ನಡೆದುದು ಇಲ್ಲಿಯೇ. ಒಟ್ಟಿನಲ್ಲಿ ಕುರುಕ್ಷೇತ್ರ ಒಂದು ಪುಣ್ಯಕ್ಷೇತ್ರ. ಮಹಾಭಾರತದ ಮಹಾ ನಾಯಕರು ತಮ್ಮ ರಕ್ತವನ್ನು ಚೆಲ್ಲಿದ ನೆಲ!

## ಶಿಬಿರ ಸ್ಥಾಪನೆ

ಪಂಜಾಬಿನ ಗಲಭೆಗಳು ಆರಂಭವಾದೊಡನೆ ಭಾರತ ಸರಕಾರವು ಆತುರದಲ್ಲಿ ನಿರಾಶ್ರಿತರಿಗೆ ಶಿಬಿರವನ್ನೇರ್ಪಾಡು ಮಾಡಬೇಕಾಯಿತು. ಉತ್ತರ ಹಿಂದೂಸ್ಥಾನದಲ್ಲಿ ಆಗಷ್ಟ್ ತಿಂಗಳ ಸೆಕೆ ಸಹಿಸಲಸಾಧ್ಯ ವಿರುತ್ತದೆ. ಆದ್ದರಿಂದ ಮೊದಲ ಆವಶ್ಯಕತೆ ಎಂದರೆ ನೀರಿನ ಸೌಕರ್ಯ. ನಿರಾಶ್ರಿತರು ತಂಡೋಪತಂಡವಾಗಿ ಬರಲಾರಂಭಿಸಿದರು. ನಡೆದು ಬಂದ ವರು ಅವರಲ್ಲಿ ಕೆಲವರು—ಗಾಡಿಗಳಲ್ಲಿ—ಬಸ್ಸುಗಳಲ್ಲಿ—ರೈಲುಗಳಲ್ಲಿ ಬಂದವರು ಕೆಲವರು. ದಿನವೂ ಬರುವ ರೈಲುಗಳು ೫-೬—ಹೋಗುವ ರೈಲುಗಳು ೫-೬. ಒಂದೊಂದು ರೈಲಿನಲ್ಲಿ ೨೦೦೦-೩೦೦೦ ಜನರು. ರೈಲುಗಳಲ್ಲೇ ಹೊಡೆದಾಟ—ಕೊಲೆ. ರೈಲುಗಳಲ್ಲಿ ಹೋಗುವ ಮುಸ್ಲಿಮರನ್ನು ಸುರಕ್ಷಿತವಾಗಿ ಕಳುಹಿಸಿ, ಬರುವ ಹಿಂದೂ ಶೀಖರಿಗೆ ಅನ್ನ ಬಟ್ಟೆ, ಆಶ್ರಯ ಕೊಟ್ಟು ನೋಡಿಕೊಳ್ಳುವದು ಒಂದು ಬೃಹತ್ ಸಮಸ್ಯೆಯಾಯಿತು. M. E. O. (Military Evacuation Organization) ಎಂಬ ಸೈನ್ಯಶಾಖೆಯು ನಿರಾಶ್ರಿತರ ನಿರ್ಗಮನ ಸಂಸ್ಥೆಯೊಂದನ್ನು ಏರ್ಪಡಿಸಿ ಕುರುಕ್ಷೇತ್ರದಲ್ಲಿ ನಿರಾಶ್ರಿತ ಶಿಬಿರವನ್ನು ತೆರೆದರು. ಡೇರೆಗಳೇ ಮನೆಗಳಾದವು. ಸೈನಿಕರೇ ಸಹಾಯಕರಾದರು.

ಈಗ ಕುರುಕ್ಷೇತ್ರದಲ್ಲಿ ೧,೭೦,೦೦೦ ನಿರಾಶ್ರಿತರಿದ್ದಾರೆ. ಜನವರಿಯ ಆರಂಭದಲ್ಲಿ ೨,೦೦,೦೦೦ ಜನ ಇದ್ದರಂತೆ. ಅದಕ್ಕೂ ಮೊದಲು ೩-೪ ಲಕ್ಷ ಜನರವರೆಗೂ ಇದ್ದರು. ಈ ಶಿಬಿರವನ್ನು ೧—೨—೩—೪ ಎಂದು ನಾಲ್ಕು ಉಪ ನಗರಗಳನ್ನಾಗಿ ವಿಭಾಗ ಮಾಡಿದ್ದಾರೆ. ಆ ಪ್ರತಿಯೊಂದು ನಗರಕ್ಕೂ ಒಬ್ಬ ನಗರಾಧಿಪತಿ

(Town Commander), ಪ್ರತಿಯೊಂದು ನಗರವನ್ನೂ ಓಣಿಗಳಾಗಿ ವಿಂಗಡಿಸಿದ್ದಾರೆ. ಪ್ರತಿ ಓಣಿಗೂ ಒಬ್ಬ ಪಂಚನಿದ್ದಾನೆ. ನಾಲ್ಕು ನಗರಗಳ ಮೇಲೆ ಒಬ್ಬ ಶಿಬಿರದ ಅಧಿಪತಿ (Camp Commander) ಇದ್ದಾನೆ. ಶಿಬಿರಾಧಿಪತಿಯೇ ಶಿಬಿರದ ಎಲ್ಲ ಆಡಳಿತ ವ್ಯವಸ್ಥೆಗೂ ಜವಾಬ್ದಾರ. ಆತನ ನೇತೃತ್ವದಲ್ಲಿ ಶಿಬಿರದ ಸೌಕರ್ಯ ವ್ಯವಸ್ಥೆಗಾಗಿ ಒಬ್ಬ (Welfare) ಆಫೀಸರ್ ಇದ್ದಾನೆ. ಇವನಿಗೆ ಕೆಲವರು ಸಹಾಯಕ ಅಧಿಕಾರಿಗಳಿದ್ದಾರೆ. ಈ ವೆಲ್ಫೇರ್ ಅಧಿಕಾರಿಯ ಕೆಳಗೆ ಅನೇಕ ಸಂಸ್ಥೆಗಳವರು ನಿರಾಶ್ರಿತರ ಸೇವೆ ಮಾಡುತ್ತಿದ್ದಾರೆ. ರಾಮಕೃಷ್ಣ ಮಿಶನ್, ಹಿಂದೂ ಮಿಶನ್, ನ್ಯಾಷನಲ್ ಕ್ರಿಶ್ಚಿಯನ್ ಕೌನ್ಸಿಲ್ ರೂರಲ್ ವೆಲ್‌ಫೇರ್ ಅಸೋಸಿಯೇಶನ್, ಪೂರ್ವ ಪಂಜಾಬ್ ಸ್ಕೌಟ್ ಅಸೋಸಿಯೇಶನ್, ಫ್ರೆಂಡ್ಸ್ ಸರ್ವಿಸ್ ಯೂನಿಟ್, ಕಾಂಗ್ರೆಸ್ ಸೇವಾದಳ, ಕಾಂಗ್ರೆಸ್ ಸೇವಿಕಾದಳ, ನಿರಾಶ್ರಿತ ಮಕ್ಕಳು, ಸ್ತ್ರೀಯರ ಆಶ್ರಮ, ಸೆಂಟ್ ಜಾನ್ ಅಂಬ್ಯುಲನ್ಸ್, ಸುರಜಮಲ್ ನಗರಮಲ್ ಮಾರವಾಡಿ ಸಹಾಯಕ ಸಂಘ, ಯುವಜನ ಸೇವಾ ಸಂಘ, ಪೂರ್ವ ಪಂಜಾಬ್ ವಿಶ್ವವಿದ್ಯಾನಿಲಯ ಪಡೆ, ಪೂರ್ವ ಪಂಜಾಬ ಉಪಾಧ್ಯಾಯಿನಿಯರ ಸಂಘ, ಇಂಡಿಯನ್ ರೆಡ್‌ಕ್ರಾಸ್, ಕುರುಕ್ಷೇತ್ರ ಸೇವಾದಳ—ಇವು ಅಲ್ಲಿ ಸೇವೆ ಮಾಡುತ್ತಿರುವ ಸಂಸ್ಥೆಗಳು.

ಹಾಲು, ಬಟ್ಟೆ, ಆಹಾರ ಹಂಚುವುದು—ಆರೋಗ್ಯ ರಕ್ಷಣೆ ಮತ್ತು ವೈದ್ಯ ಸಹಾಯ, ನಗರಾಡಳಿತ, ಎಳೆಯ ಮಕ್ಕಳ ಶಾಲೆ, ಕಲೆ ಮತ್ತು ಗೃಹಕೈಗಾರಿಕೆ –ತಪ್ಪಿಸಿಕೊಂಡವರನ್ನು ಹುಡುಕುವುದು, ವಿಶ್ವವಿದ್ಯಾಲಯದ ಆಡಳಿತ, ಕೆಲಸವಿಲ್ಲದವರಿಗೆ ಕೆಲಸ ಒದಗಿಸುವುದು, ಅನಾಥ ಸ್ತ್ರೀಯರ ಮತ್ತು ಮಕ್ಕಳ ಪೋಷಣೆ, ಬಂದ ನಿರಾಶ್ರಿತರ ಸ್ವಾಗತ, ವಿಚಾರಣಾ ಕಚೇರಿ, ಶಿಬಿರದ ಕೆಲಸ, ವಿದ್ಯಾಭ್ಯಾಸ, ಪ್ರಚಾರ ಇವು ಮುಖ್ಯ ಕೆಲಸಗಳು. ಕಾಹಿಲೆಯಾದವರು, ರಜೆಯಮೇಲೆ ಹೋದವರು, ಕೆಲಸಕ್ಕೆ ಬಾರದವರು ಇವರ ಸ್ಥಾನದಲ್ಲಿ ನೇಮಿಸಲು ಸ್ವಯಂಸೇವಕರಲ್ಲಿ ಒಂದು ಮೀಸಲು ಪಡೆಯೂ ಇದೆ.

## ನಿರಾಶ್ರಿತರ ಮಹಾನಗರ

ಮಹಾಭಾರತದ ರಣಭೂಮಿ ಎಂದು ಬಯಲು ಪ್ರದೇಶವಾಗಿದ್ದ ಕುರುಕ್ಷೇತ್ರವು ಇಂದು ೧,೬೦,೦೦೦ ಜನರು ವಾಸಮಾಡುವ ಒಂದು ತಂಬೂಗಳ ಮಹಾನಗರವಾಗಿದೆ. ಹೊರಗಿನಿಂದ ಬಂದವರನ್ನು ಉಪ ನಗರಗಳಿಗೆ ಕಳುಹಿಸುವ ಮುಂಚೆ ಬಂದವರು ಸಾಂಕ್ರಾಮಿಕ ರೋಗ ಗಳನ್ನು ಹರಡದಂತೆ ಮೊದಲು ಟ್ರಾನ್ಸಿಟ್ ಕ್ಯಾಂಪ ಎಂಬ ತಾತ್ಕಾಲಿಕ ಶಿಬಿರದಲ್ಲಿ ಇಳಿಸುತ್ತಾರೆ. ಅವಶ್ಯವಿದ್ದವರಿಗೆ ಇನಾಕ್ಯುಲೇಶನ್ ವ್ಯಾಕ್ಸಿ ನೇಶನ್ ಮಾಡುತ್ತಾರೆ. ರೋಗಿಗಳಿದ್ದರೆ ಗುಣ ಮಾಡುತ್ತಾರೆ. ಇಲ್ಲಿ ಅವರ ಊರ ಹೆಸರು, ಪಟ್ಟಿ, ನಷ್ಟ ಮುಂತಾದ ಎಲ್ಲ ಮಾಹಿತಿ ತೆಗೆದು ಕೊಳ್ಳುತ್ತಾರೆ. ಅನಂತರ ಉಪನಗರಗಳಲ್ಲಿ ಸ್ಥಾನ ನಿರ್ದೇಶಮಾಡಿದ ನಂತರ ಒಳಗೆ ಬಿಡುತ್ತಾರೆ. ಪ್ರತಿಯೊಂದು ಉಪನಗರದಲ್ಲೂ ಒಂದು ಡೇರೆಯು (ತಂಬು) ಆ ಉಪನಗರದ ಭವನವಾಗಿದೆ. ಅಲ್ಲಿ ಆ ಉಪನಗರ ಪಂಚಾಯತರು ಸೇರಿ ಸಾಮೂಹಿಕವಾಗಿ ಕಲೆತು, ತಮ್ಮ ಕುಂದುಕೊರತೆಗಳನ್ನು ಅಧಿಕಾರಿಗಳಿಗೆ ತಿಳಿಸುತ್ತಾರೆ. ಪ್ರತಿ ಉಪ ನಗರಕ್ಕೂ ಒಂದು ಆರೋಗ್ಯಕೇಂದ್ರ ಇದೆ. ಎಳೆಯ ಮಕ್ಕಳ ಶಾಲೆ, ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ವಯಸ್ಕರ ಶಾಲೆ, ಬಾಲಕಿಯರ ಶಾಲೆಗಳಿವೆ. ಈಗ ಎಲ್ಲರಿಗೂ ಊಟಕ್ಕೆ ಸರಕಾರದ ವೆಚ್ಚದಿಂದ ಒದಗಿಸಲಾಗುತ್ತದೆ. ಶಿಬಿರದ ಒಂದು ದಿನದ ವೆಚ್ಚ ಎರಡು ಲಕ್ಷ ರೂ. ಆಗುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ ಮೂರು ಗಜ ಬಟ್ಟೆ ಕೊಟ್ಟಿದ್ದಾರೆ. ಚಳಿಗಾಲದಲ್ಲಿ ಕಂಬಳಿಗಳನ್ನು ಕೊಟ್ಟಿದ್ದಾರೆ. ಒಂದೊಂದು ಡೇರೆಯಲ್ಲಿ ಸಣ್ಣದಾದರೆ ೧೦-೧೨ ಜನ, ದೊಡ್ಡದಾದರೆ ೨೫-೩೦ ಜನ ವಾಸಮಾಡ ಬೇಕು. ಅಲ್ಲಲ್ಲಿ ಕೊಳಾಯಿ ಬಾವಿ(Tube wells)ಗಳಿಂದ ನೀರನ್ನು ಒದಗಿಸುತ್ತಾರೆ. ಡೇರೆಗಳಲ್ಲಿ ಅಡಿಗೆ ಮಾಡಲು ಅವಕಾಶ ಕೊಡದೆ ಅಡಿಗೆ ಮಾಡುವದಕ್ಕೆ ಬೇರೆ ಗುಡಿಸಲುಗಳನ್ನು ಕಟ್ಟಿ ಕೊಟ್ಟಿದ್ದಾರೆ. ಸಿಕ್ಕ ಕಡೆಗೆ ಕೊಳೆ ಮಾಡದಂತೆ ಒಂದೊಂದು ಗಲ್ಲಿಗೆ ಒಂದೊಂದರಂತೆ ೮-೧೦ ಅಡಿ ಆಳದ ಗುಂಡಿಯ ಕಕ್ಕಸುಗಳ ಸಾಲು

ಗಳನ್ನು ಕಟ್ಟಿದ್ದಾರೆ. ಸ್ನಾನಕ್ಕೆ ಪ್ರತ್ಯೇಕ ಸ್ಥಳಗಳನ್ನು ಮಾಡಿ ಕೊಟ್ಟಿದ್ದಾರೆ. ಕೊಚ್ಚೆ(ರಾಡಿ)ಯಿಂದ ಸೋಳ್ಳೆಯಾಗದಂತೆ ನಿತ್ಯವೂ D. D. T.ಯನ್ನು ಚಿಮುಕಿಸುತ್ತಾರೆ. ನಮ್ಮ ಕಾರಿಗೂ ಶಿಬಿರವನ್ನು ಪ್ರವೇಶಿಸುತ್ತಲೇ ಡಿ. ಡಿ. ಟಿ.ಯ ಪ್ರೋಕ್ಷಣೆಯಾಯಿತು !

## ವೈದ್ಯ ಸಹಾಯ

ನಿರಾಶ್ರಿತರ ವೈದ್ಯ ಸಹಾಯಕ್ಕಾಗಿ ದೊಡ್ಡದೊಂದು ಆಸ್ಪತ್ರೆ ಇದೆ. ೬೦ ಜನ ಡಾಕ್ಟರುಗಳು—೨೨ ಜನ ದಾದಿಯರು ಕೆಲಸ ಮಾಡುತ್ತಿದ್ದಾರೆ. ಶಸ್ತ್ರಚಿಕಿತ್ಸೆಗಾಗಿ ಸರ್ಜಿಕಲ್ ವಾರ್ಡ್ ಇದೆ. ಸಾಮಾನ್ಯ ರೋಗಿಗಳಿಗಾಗಿ ೧೦೦೦ ಹಾಸಿಗೆಗಳು—ಸಾಂಕ್ರಾಮಿಕ ಜಾಡ್ಯಗಳಿಗಾಗಿ ೩೩೫, ಹೆರಿಗೆಗಾಗಿ ೧೫೦, ಮಕ್ಕಳಿಗಾಗಿ ೯೦ ಹಾಸಿಗೆಗಳಿವೆ. ರಕ್ತ ಕಡಿಮೆ ಇರುವವರಿಗೆ ರಕ್ತವನ್ನೊದಗಿಸಲು ರಕ್ತನಿಧಿ (Blood Bank) ಇದೆ. ಜನವರಿ ತಿಂಗಳಲ್ಲಿ ೭೬ ಜನ, ಫೆಬ್ರುವರಿ ತಿಂಗಳಲ್ಲಿ ೮೭ ಜನ ತಮ್ಮ ರಕ್ತವನ್ನು ದಾನ ಮಾಡಿದರು. ಸಣ್ಣದೊಂದು ಪ್ರಯೋಗಶಾಲೆಯಿದೆ. ರೋಗಿಗಳಿಗೆ ಫ್ಲಷ್ ಕಕ್ಕಸುಗಳನ್ನು ಒದಗಿಸಿದ್ದಾರೆ. ಚಾಪೆಗಳಿಂದ ಗುಡಿಸಲುಗಳನ್ನು ಕಟ್ಟಿ, ವಾರ್ಡ್‌ಗಳನ್ನು ಮಾಡಿದ್ದಾರೆ. ಇದಲ್ಲದೆ ಪ್ರತಿಯೊಂದು ಉಪನಗರದ ಆರೋಗ್ಯ ಕೇಂದ್ರದಲ್ಲಿಯೂ ಪ್ರಥಮ ಚಿಕಿತ್ಸೆಗೆಂದು ೧೦ ಜನರಿಗೆ ಹಾಸಿಗೆಗಳಿವೆ. ಶಿಬಿರದಲ್ಲಿ ಕಾಹಿಲೆಯಾದವರನ್ನು ಹುಡುಕಿ ತರಲು ಒಂದು ಸಣ್ಣ ದಾದಿಯರ ಪಡೆ ಇದೆ.

## ವಿದ್ಯಾಭ್ಯಾಸ

ಶಿಶು ಪೋಷಣೆ ಸಂಘ(Child Welfare Society)ದ ಮಹಿಳೆಯರು ಮಕ್ಕಳಿಗಾಗಿ ಪ್ರತಿಯೊಂದು ಉಪನಗರದಲ್ಲಿ ಮಕ್ಕಳ ಶಾಲೆಗಳನ್ನು (Nursery Schools) ನಡೆಸುತ್ತಿದ್ದಾರೆ. ಕಾಗದ, ಬಟ್ಟೆಗಳಿಂದ ಆಟಿಗೆಗಳನ್ನು ಮಾಡುವುದು—ಪ್ರಾಣಿಗಳನ್ನು, ಹಕ್ಕಿಗಳನ್ನು ಮಾಡುವದು, ಚಿತ್ರಗಳನ್ನು ಬರೆಯುವದು—ಹಾಡುಗಳನ್ನು ಹೇಳುವದು ಕಲಿಸುತ್ತಿದ್ದಾರೆ. ಶಾಲೆ ಸಹ ಸಣ್ಣ ಡೇರೆಗಳಲ್ಲಿ—ಡೇರೆ ಸಾಲದಾದಾಗ ಮುಳ್ಳುಗಳ ಬೇಲಿ ಹಾಕಿದ ಮೈದಾನದಲ್ಲಿ. ಶ್ರೀಮತಿ

ಚೌಲಾ ಅದರ ಮುಖ್ಯ ಅಧಿಕಾರಿಗಳು. ಶ್ರೀ ರಾಮಕೃಷ್ಣ ಮಿರ್ಷನವರು ನಿತ್ಯವೂ ೭೭ ಕೇಂದ್ರಗಳಲ್ಲಿ ೨೫೦೦೦ ಜನ ಮಕ್ಕಳಿಗೆ ಹಾಲು ಹಂಚುವ ವ್ಯವಸ್ಥೆ ಕೈಗೊಂಡಿದ್ದಾರೆ. ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆಗಳೂ ಹೀಗೆಯೇ ನಡೆಯುತ್ತವೆ. ತಂದೆ ತಾಯಿಗಳನ್ನು, ಗಂಡಂದಿರನ್ನು ಕಳೆದುಕೊಂಡ ಅನೇಕ ಚಿಕ್ಕ ಹುಡುಗಿಯರಿದ್ದಾರೆ. ಮಹಿಳಾ ಸೇವಾದಳದವರು ಸುಮಾರು ೫೦೦ ಜನ ಹುಡುಗಿಯರಿಗೆ ಅವರವರ ವಯಸ್ಸಿಗನುಗುಣವಾಗಿ ವಿದ್ಯಾಭ್ಯಾಸದ ತರಗತಿಗಳನ್ನು ನಡೆಸುತ್ತಿದ್ದಾರೆ. ನಾವು ಹೋದಾಗ ವಿಶ್ವವಿದ್ಯಾನಿಲಯದಲ್ಲಿ ಓದುತ್ತಿದ್ದ ನಿರಾಶ್ರಿತ ಯುವತಿಯೊಬ್ಬಳು ಹಿಂದೂ ಸಮಾಜದ ದೋಷಗಳು ಎಂದು ಬಾಲ್ಯ ವಿವಾಹದ ಮೇಲೆ ತನ್ನ ಸೋದರಿಯರಿಗೆ ಉಪನ್ಯಾಸ ಮಾಡುತ್ತಿದ್ದಳು. ಪೂರ್ವ ಪಂಜಾಬ ವಿಶ್ವವಿದ್ಯಾನಿಲಯದಲ್ಲಿ ಈ ಗಲಭೆಗಳಿಂದ ತಮ್ಮ ವಿದ್ಯಾರ್ಜನೆಯನ್ನು ಕಳೆದುಕೊಂಡ ೫೦೦ ಜನ ವಿದ್ಯಾರ್ಥಿಗಳು ಇದ್ದಾರೆ.

ಈ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ನಿರಾಶ್ರಿತರಿಗೆ ಬಟ್ಟೆ ಹಂಚುವುದು, ರೇಶನ್ ಹಂಚುವುದು, ಪ್ರೌಢ ವಿದ್ಯಾರ್ಥಿಗಳಿಗೆ ಪಾಠ ಹೇಳುವುದು, ಶಿಬಿರದ ನಿರ್ಮಲೀಕರಣ ಕೆಲಸ ಮಾಡುತ್ತಿದ್ದಾರೆ. ತಾತಾ ಸಮಾಜ ವಿಜ್ಞಾನಶಾಸ್ತ್ರ ಸಂಸ್ಥೆಯವರು ಅನಾಥ ಸ್ತ್ರೀಯರಿಗೆ, ಮಕ್ಕಳಿಗೆ ಶಾಲೆಗಳನ್ನು ನಡೆಸುತ್ತಿದ್ದಾರೆ. ಶ್ರೀಮತಿ ಖಂಡೆ ಸೇರಿಯಾ ಅದರ ಸಂಚಾಲಕರು—ಜುನಾಗಡದ ಕಾಲೇಜಿನಲ್ಲಿ ಬಿ.ಎ. ಪಾಸುಮಾಡಿ—ಈಗ ಕುರುಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದಾರೆ.

ನಿರಾಶ್ರಿರಲ್ಲಿಯೇ ಶಿಬಿರಕಾರ್ಯಗಳನ್ನು ನಡೆಸಲು—ಯುವಕರನ್ನು ಕುರುಕ್ಷೇತ್ರ ಸೇವಾದಳದ ಕೈಕೆಳಗೆ ಸಂಘಟಿಸಲು—ಪ್ರತ್ಯೇಕ ಶಿಬಿರ ವೊಂದು ಶ್ರೀ ಮುಖರ್ಜಿಯವರ ನೇತೃತ್ವದಲ್ಲಿದೆ.

## ಉದ್ಯೋಗ ಶಿಕ್ಷಣ

ಶಿಬಿರದ ಮುಖ್ಯ ಪ್ರಶ್ನೆ ಎಂದರೆ—ಶಿಬಿರದ ಇಷ್ಟು ಜನರು ಸೋಮಾರಿಗಳಾಗಿ ಸಮಾಜ ಜೀವನಕ್ಕೆ ಕಂಟಕರಾಗದಂತೆ ಅವರಿಗೆ

ಉದ್ಯೋಗ ಒದಗಿಸುವುದು ಮತ್ತು ಉಪಯುಕ್ತ ಜೀವನ ನಡೆಸಲು ಅನುಕೂಲವಾಗುವಂತೆ ಉದ್ಯೋಗ ಕಲಿಸುವುದು. ಮುಖ್ಯ ಉದ್ಯೋಗ ಕೇಂದ್ರವು ಎರಡನೆಯ ಉಪನಗರದಲ್ಲಿ—ಶಾಂತಿನಿಕೇತನ ಶ್ರೀ ಸುರೇಂದ್ರ ಕುಮಾರ ದೇ ಅವರ ನೇತೃತ್ವದಲ್ಲಿ ಬಹಳ ದಕ್ಷತೆಯಿಂದ ನಡೆಯುತ್ತಿದೆ. ಸುಮಾರು ೮೦ ಜನರಿಗೆ ಬಡಗಿ ಕೆಲಸವನ್ನು ಕಲಿಸುತ್ತಿದ್ದಾರೆ. ಶಿಬಿರದ ಕಚೇರಿಗೆ ಮತ್ತು ನಿರಾಶ್ರಿತರಿಗೆ ಬೇಕಾದ ಮೇಜು, ಕುರ್ಚಿ, ಅಲಮಾರು, ಕಾಲುಮಣೆ, ಮಂಚ—ಶಾಲೆಗಳಿಗೆ ಕಪ್ಪುಹಲಿಗೆ, ಮಗ್ಗಗಳು ಮುಂತಾದ ಎಲ್ಲ ಮರದ ಸಾಮಾನುಗಳನ್ನು ಅಲ್ಲಿಯೇ ತಯಾರು ಮಾಡುತ್ತಾರೆ. ಸರಕಾರದವರು ಮರ ಒದಗಿಸುತ್ತಾರೆ. ಆದರೆ ಉಪಕರಣಗಳು ಸಾಲವು. ಕಲಿಯಲು ಹೆಚ್ಚು ಜನರು ಉತ್ಸುಕರಾಗಿದ್ದರೂ ಉಪಕರಣಗಳ ಅಭಾವದಿಂದ ಸಾಧ್ಯವಿಲ್ಲದಾಗಿದೆ. ಪೂರ್ವ ಪಂಜಾಬಿನಲ್ಲಿ ಕಮ್ಮಾರ ಕೆಲಸವೆಲ್ಲ ಸಾಮಾನ್ಯವಾಗಿ ಮುಸಲ್ಮಾನರ ಕೈಲಿತ್ತು. ಗಲಭೆಯಿಂದ ಅವರೆಲ್ಲ ಪಾಕಿಸ್ಥಾನಕ್ಕೆ ಹೋಗಿದ್ದಾರೆ. ಹೆಚ್ಚು ಸಂಖ್ಯೆಯಲ್ಲಿ ಕಮ್ಮಾರರು ದೊರೆಯದಿದ್ದರೆ —ಪೂರ್ವ ಪಂಜಾಬಿನ ರೈತಜೀವನವೇ ಕುಸಿಯುತ್ತದೆ. ಪೂರ್ವ ಪಂಜಾಬಿನ ಮುಖ್ಯ ಕಸಬು ವ್ಯವಸಾಯ. ದಿಲ್ಲಿಯಿಂದ ಕುರುಕ್ಷೇತ್ರದವರೆಗೆ ರಸ್ತೆಯ ಇಕ್ಕಡೆಯಲ್ಲೂ ಎಷ್ಟು ದೂರ ನೋಡಿದರೂ ಗೋದಿ ಮತ್ತು ಕಡಲೆ ಹೊಲಗಳು—ಅಂಗೈಯಂತೆ ಸಮತಳವಾದ ಭೂಮಿ—ಮಧ್ಯೆ ಲಜ್ಜೆಯಿಂದ ಮರೆಯಾಗಿ ಸುಳಿದೋಡುವಂತೆ ಯಮುನೆಯ ನೀರ್ಗಾಲುವೆಗಳು. ಕಮ್ಮಾರ ಕೆಲಸ ಕಲಿಸಲು ಒಂದು ಶಾಲೆ ತೆಗೆದಿದ್ದಾರೆ. ಕುಳ, ಕುಡಗೋಲು, ನೇಗಿಲು, ಕುಂಟೆ, ತಾಳುಗಳು ಮುಂತಾದ ವ್ಯವಸಾಯ ಸಾಮಗ್ರಿಗಳನ್ನು ತಯಾರು ಮಾಡುವುದನ್ನು ಕಲಿಸುತ್ತಿದ್ದಾರೆ. ಶ್ರಮದ ಕೆಲಸ—ಆದ್ದರಿಂದ ಸೇರಿದವರು ಬಿಡುತ್ತಾರೆ. ಹೊಸಬರು ಬಂದು ಸೇರುತ್ತಾರೆ.

ಇನ್ನೊಂದು ಕಡೆ ಮರಗೆಲಸದಿಂದ ಬರುವ ಪುಡಿಯನ್ನು ಸಿಮೆಂಟಿ ಜತೆಗೆ ಬೆರಸಿ ಹಲಗೆಗಳನ್ನು ಮಾಡುತ್ತಿದ್ದಾರೆ. ಇವುಗಳನ್ನು ಮನೆ

ಕಟ್ಟಲು ಉಪಯೋಗಿಸುತ್ತಿದ್ದಾರೆ. ಬೆಂಕಿಯಿಂದ ಸಹ ಉರಿಯುವದಿಲ್ಲ, ನೀರಿನಲ್ಲಿ ಕರಗುವದಿಲ್ಲ. ಸುಮಾರು ೨ ಅಂಗುಲ ದಪ್ಪವಿದೆ. ಒಳಗೆ ತೆಳ್ಳಗೆ ಸೀಮೆಂಟ ಮಾಡಿದರೆ ಒಳ್ಳೆಯ ಗೋಡೆಯಾಗುತ್ತದೆ. ಬಿಸಿಲು ಕಾಲದಲ್ಲಿ ತಣ್ಣಗೆ ಇರುತ್ತದೆ. ಸಾಬೂನು ತಯಾರಿಕೆಯನ್ನು ಕಲಿಸು ತ್ತಿದ್ದಾರೆ. ಈಗ ಶಿಬಿರಕ್ಕೆ ಬೇಕಾಗುವ ಎಲ್ಲ ಸಾಬೂನನ್ನೂ ಶಿಬಿರ ದಲ್ಲಿಯೇ ತಯಾರಿಸುತ್ತಾರೆ.

ಬಟ್ಟೆ ನೇಯುವುದನ್ನು ಕಲಿಸಲು ೫೦ ಮಗ್ಗಗಳಿವೆ. ಬಾಬಿನ್ ಗಳಿಗೆ ದಾರ ಸುತ್ತುವುದು, ಬಟ್ಟೆ ಹೊಲಿಯುವದು, ಲಾಡಿ ಹೆಣೆಯುವುದು, ಜಮುಖಾನೆ ನೇಯುವುದು ಹೇಳಿಕೊಡುತ್ತಿದ್ದಾರೆ. ಚರ್ಮದಿಂದ ಕೈಚೀಲ ಮುಂತಾದ ಸಾಮಾನು ಮಾಡುವುದನ್ನು ಕಲಿಸುತ್ತಿದ್ದಾರೆ. ಪಂಜಾಬದ ಹುಡುಗಿಯರು ಚರ್ಮದ ಮೇಲೆ ಕಾಗದ ಚಿತ್ರಗಳನ್ನಿಟ್ಟು ಕೆತ್ತಿ, ಬಣ್ಣ ಹಾಕಿ, ಬಹಳ ಅಂದವಾದ ಕೈಚೀಲ, ಹಣದ ಚೀಲಗಳನ್ನು ತಯಾರಿಸುತ್ತಾರೆ. ಮುದ್ರಣದ ಕೆಲಸವನ್ನು ಹೇಳಿಕೊಡುತ್ತಿದ್ದಾರೆ. ಸಿಯಾಲಕೂಟದ ಕಡೆಯಿಂದ ಬಂದ ನಿರಾಶ್ರಿತರು ಮಕ್ಕಳ ಕ್ರಿಕೆಟ ಬ್ಯಾಟ್‌ಗಳನ್ನು ತಯಾರಿಸುತ್ತಿದ್ದಾರೆ. ಮೋಟಾರು ರಿಪೇರಿ ಕೆಲಸ ಕಲಿಸಲು ಮೋಟಾರ್ ಮೆಕ್ಯಾನಿಕ್ ಸ್ಕೂಲ್ ಒಂದಿದೆ. ಒಂದೊಂದು ತರಗತಿಗೆ ೩೦ರಂತೆ ನಿತ್ಯವೂ ನಾಲ್ಕು ತರಗತಿಗಳನ್ನು ನಡೆಸುತ್ತಿದ್ದಾರೆ.

## ಹೆಣ್ಣುಮಕ್ಕಳಿಗೆ ಶಿಕ್ಷಣ

ಹೆಣ್ಣುಮಕ್ಕಳಿಗೆ ಕಸೂತಿ ಕೆಲಸ ಮತ್ತು ಹಂಚಿಕಡ್ಡಿಯಿಂದ ತರಹೆವಾರಿ ಬುಟ್ಟಿಗಳನ್ನು ಮಾಡುವುದನ್ನು ಕಲಿಸುತ್ತಿದ್ದಾರೆ. ಬಟ್ಟೆ ಗಳನ್ನು ಉಬ್ಬೆಗೆ ಹಾಕಲು ಸುರೇಂದ್ರ ಕುಮಾರ ದೇ ಅವರು ಕೈಗೆಲಸ ದಿಂದ ಅಲ್ಲಿಯೇ ಒಂದು ಯಂತ್ರ ತಯಾರಿಸಿದ್ದಾರಂತೆ! ಅದಕ್ಕೆ ೩೦ ರೂ. ಮಾತ್ರ ತಗಲಿತಂತೆ. ಇಂಗ್ಲೆಂಡ್ ಅಥವಾ ಫ್ರಾನ್ಸಿನಿಂದ ಅದನ್ನೇ ಕೊಳ್ಳ ಬೇಕಾದರೆ ೮೦೦ ರೂ. ಆಗುತ್ತದೆ. ಅರ್ಧ ಸೀಳಿದ ಒಂದು ಪೀಪಾಯ ಎರಡು ಹೋಳುಗಳು—ಕೆಳಗೊಂದು ಹೋಳು, ಮೇಲೊಂದು ಹೋಳು —ಎರಡನ್ನೂ ಕೂಡಿಸಲು ಹೊರಗೆ ಕೊಕ್ಕೆಗಳು. ಕೆಳಗಿನದರಲ್ಲಿ ಉಬ್ಬೆ

ಮಾಡುವ ದ್ರಾವಕ. ಒಳಗೆ ಜಾಕಾಯಿ ಹಲಗೆಯ ಹೋಳಾದ ಸಣ್ಣ ಪೀಪಾಯಿ—ಸ್ಪೈಯುಡ್ಪ ಕ್ಕೂ ತೂತುಗಳು. ಒಳಗೆ ಒಗೆಯುವ ಬಟ್ಟೆ ಹಾಕಿ ಕೊಕ್ಕೆ ಜೋಡಿಸಿ ಮುಚ್ಚಬಹುದು. ಇದನ್ನು ಹೊರಗಿನ ಪೀಪಾಯಿ ಯಲ್ಲಿ ತಿರುಗಿಸಲು ಒಂದು ಕೈಹಿಡಿ. ಎಲ್ಲವೂ ಮರ ಮತ್ತು ತಗಡಿನಲ್ಲಿ —ಮೂವತ್ತು ರೂಪಾಯಿ ವೆಚ್ಚದಲ್ಲಿ ಬಟ್ಟೆಗೆ ಬಣ್ಣ ಹಾಕುವದನ್ನು ಕಲಿಸುತ್ತಾರೆ. ಮಣ್ಣಿನ ಸಾಮಾನು ಮಾಡುವದನ್ನು ಕಲಿಸುತ್ತಿದ್ದಾರೆ. ಕೋಳಿ ಸಾಕುವುದನ್ನೂ ಹೇಳಿಕೊಡುತ್ತಿದ್ದಾರೆ.

ಸಹಕಾರ ತತ್ವದ ಮೇಲೆ ಸಾಮೂಹಿಕ ಉಪಹಾರಗೃಹ ಒಂದನ್ನು ನಡೆಸಲು ತಲಾ ಒಂದು ರೂಪಾಯಿ ಹಾಕಿ ೧೦೦೦ ರೂಪಾಯಿ ಸಂಗ್ರಹಿಸುತ್ತಿದ್ದಾರೆ. ಹೊರಗಿನಿಂದ ಬಂದ ಸಾಮಾನಿನಿಂದ ನಿರಾಶ್ರಿತರೇ ನಿರಾಶ್ರಿತರ ಉಪಯೋಗಕ್ಕೆಂದು ಇಲ್ಲಿ ಒಂದು ವಿಶ್ರಾಂತಿಗೃಹವನ್ನು ನಿರ್ಮಿಸಿದ್ದಾರೆ. ಎರಡು ಊಟದ ಮನೆಗಳ ಮಧ್ಯೆ ಒಂದು ಕೌಂಟರ್. ಯಾವಾಗ ಬೇಕಾದರೂ ಪ್ರತಿಯೊಂದು ಭಾಗವನ್ನು ಕಳಚಿ ಬೇರೊಂದು ಕಡೆ ತೆಗೆದುಕೊಂಡು ಜೋಡಿಸಬಹುದು. ನೆಲಕ್ಕೆ ಹಲಗೆ, ತಗಡಿನ ಹೊದಿಕೆ—ಮರದ ಚೌಕಟ್ಟಿನಲ್ಲಿ ಚಾಪೆಯ ಗೋಡೆಗಳಿವೆ. ವೆಚ್ಚ ೩೦೦ ರೂಪಾಯಿ.

ಮಣ್ಣು ಮತ್ತು ಇಟ್ಟಿಗೆ ಕೊರೆದು—ಮಣ್ಣಿನಿಂದಲೆ ಮನೆಯನ್ನು ಕಟ್ಟುತ್ತಿದ್ದಾರೆ. ಮಕ್ಕಳು ತಯಾರಿಸಿದ ಆಟಿಗೆಗಳು, ಕಸೂತಿ ಸಾಮಾನು ಗಳು ಸುಂದರವಾಗಿ ಕಲಾಪೂರ್ಣವಾಗಿವೆ. ಈ ಉದ್ಯೋಗ ಶಿಕ್ಷಣವು ಸುರೇಂದ್ರ ಕುಮಾರ ದೇ ಅವರು ಬಂದ ಒಂದು ತಿಂಗಳಿನಿಂದ ಆರಂಭವಾಗಿ ಬಹು ದಕ್ಷತೆಯಿಂದ ಮುಂದುವರಿಯುತ್ತಿದೆ. ಇದರ ಉತ್ಪನ್ನಕ್ಕಾಗಿ ಪ್ರದರ್ಶನ ಮತ್ತು ಮಾರಾಟಕ್ಕಾಗಿ ಕೇಂದ್ರ ಕಚೇರಿಯ ಬಳಿ ಒಂದು ಪ್ರದರ್ಶನಶಾಲೆಯನ್ನು, ಮಾರಾಟದ ಅಂಗಡಿಯನ್ನು ತೆರೆಯಲಿದ್ದಾರೆ.

## ಸಾಮಾಜಿಕ ಜೀವನ

ಒಂದನೆಯ ಉಪನಗರದಲ್ಲಿ ಸುಮಾರು ೫೦೦೦೦, ೨ನೆಯ ನಗರದಲ್ಲಿ ೩೦೦೦೦, ಮೂರನೆಯದರಲ್ಲಿ ೪೦೦೦೦, ೪ನೆಯದರಲ್ಲಿ

೫೦೦೦೦ ಈ ರೀತಿ ಸುಮಾರು ೧೭೦೦೦೦ ಜನರು ಕುರುಕ್ಷೇತ್ರದಲ್ಲಿದ್ದಾರೆ. ಳನೆಯ ನಗರದಲ್ಲಿರುವವರೆಲ್ಲ ವಾಯುವ್ಯ ಪ್ರಾಂತದಿಂದ ಬಂದವರು, ಗುಜರಾತ ರೈಲು ದುರಂತದಲ್ಲಿ ನೊಂದವರು ಇಲ್ಲಿದ್ದಾರೆ. ಒಂದನೆಯ ಕ್ಯಾಂಪಿನಲ್ಲಿ ಪರಂಜಿನಾರ್ ನಿರಾಶ್ರಿತರಿದ್ದಾರೆ. ಈಚೆಗೆ ಭಾವಲಪುರ ದಿಂದ ಜನರು ಬರುತ್ತಿದ್ದಾರೆ. ಉಳಿದವರೆಲ್ಲ ಪಶ್ಚಿಮ ಪಂಜಾಬಿನಿಂದ ಬಂದವರು. ಶೀಖರು, ಹಿಂದೂಗಳು, ಕ್ರಿಶ್ಚಿಯನರು ಸಹ ಇದ್ದಾರೆ. ಅರ್ಧಕ್ಕಿಂತ ಹೆಚ್ಚು ಜನ ವ್ಯವಸಾಯ ಕಸುಬಿನವರು—ಉಳಿದವರು ವಿವಿಧ ವೃತ್ತಿಯವರು; ಮಕ್ಕಳೇ ಹೆಚ್ಚು. ರೋಗ ಮುದುಕರು ಮತ್ತು ಅಶಕ್ತರಿಗೆ ಬೇರೊಂದು 'ಇರ್ಫರ್ಮರಿ' ಬಿಡಾರ ಮಾಡಿ ಶುಶ್ರೂಷೆ ಮಾಡುತ್ತಿದ್ದಾರೆ. ಇಷ್ಟೆಲ್ಲ ಉದ್ಯೋಗ ಕಲ್ಪಿಸಿದರೂ ಸಹ ಎಲ್ಲರಿಗೂ ಉದ್ಯೋಗವಿಲ್ಲ. ಉದ್ಯೋಗವಿಲ್ಲದವನ ಮನಸ್ಸು ಒಂದು ದೆವ್ವದ ಮನೆ. ಜನರಿಗೆ ಏನಾದರೂ ಉದ್ಯೋಗ ಕೊಡಲೆಂದು ಕಟ್ಟಿಗೆ ತರಲು ಕಳಿಸುತ್ತಾರೆ. ಪಂಜಾಬಿನಲ್ಲಿ ಬಂಜರು, ಕಾಡು ಕಡಿಮೆ. ೫-೬ ಮೈಲುಗಳಿಂದ ಕುರುಚಲು, ಜಾಲಿ ಕಟ್ಟಿಗೆ ತರಬೇಕು—ಅದೇ ಒಂದು ಕೆಲಸ—ಸಂಜೆಯ ವೇಳೆ ಜನರು ಸಾಲುಗಟ್ಟಿ ಕಟ್ಟಿಗೆ ತರುವದನ್ನು ನೋಡಬಹುದು. ತಾವು ತಂದ ಕಟ್ಟಿಗೆಯನ್ನು ಒಂದರ ಮೇಲೊಂದು ಚಚ್ಚೌಕಾಗಿ ಏರಿಸಿ ಅಂದವಾಗಿ ಇಡಬೇಕೆಂದು ವಿಧಿಸ ಲಾಗಿದೆ. ಅವರು ಅಡಿಗೆಯನ್ನು ಹೊರಗಡೆ ಬೇರೆ ಗುಡಿಸಲುಗಳಲ್ಲಿ ಮಾಡಬೇಕು. ಕಸಕಡ್ಡಿಯನ್ನು ಸಿಕ್ಕಲ್ಲಿ ಎಸೆಯಬಾರದು.

ಕಸವನ್ನು ಕಸದ ಬುಟ್ಟಿಯಲ್ಲೇ ಎಸೆಯಬೇಕು. ಕೊಳಕು ನೀರನ್ನು ಅದರ ಗುಂಡಿಗಳಲ್ಲೇ ಚೆಲ್ಲಬೇಕು. ಎಲ್ಲರಿಗೂ ಸಕ್ರಮ ಜೀವನ ಆದರೂ ಎಲ್ಲರಿಗೂ ಕೆಲಸವಿಲ್ಲ. ಪ್ರತಿಯೊಂದು ನಗರದಲ್ಲೂ ಒಂದೊಂದು ಅಂಗಡಿ ಸಾಲು—ಅವರಿಗೆ ಬೇಕಾಗುವ ಕಾಯಿಪಲ್ಲೆ ಅಲ್ಲಿಯೇ ಕೊಳ್ಳಬಹುದು. ಕೇಂದ್ರ ಕಚೇರಿಯ ಹಿಂದೆ ಇಡೀ ನಗರದ ದೊಡ್ಡ ಪೇಟಿ ಸಾಲು ಇದೆ. ಬಯಲುಪೇಟಿ ಇರುವ ಡೇರೆಗಳಲ್ಲಿ ಸ್ಥಳ ಸಾಲದು. ಸಣ್ಣ ಡೇರೆಯಲ್ಲಿ ೧೦-೧೨ ಜನರೂ ದೊಡ್ಡ ಡೇರೆಯಲ್ಲಿ

೨೫-೩೦ ಜನರೂ ಇರಬೇಕೆಂದು ವಿಧಿಸಲಾಗಿದೆ. ಮೂರನೆಯ ನಗರದಲ್ಲಿ ನಾವು ನೋಡಿದ ಒಂದು ಡೇರೆಯಲ್ಲಿ ಆರು ಸಂಸಾರದ ೩೪ ಜನರಿದ್ದರು. ಒಂದೇ ಊರಿನವರು—ಪರಿಚಯಸ್ಥರು—ಒಟ್ಟುಗೂಡಿ ಹೊಂದಿಕೊಂಡು—ಡೇರೆಯನ್ನು ಹಂಚಿಕೊಂಡು—ಅಷ್ಟರಲ್ಲಿಯೇ ತೃಪ್ತರಾಗಿ ಜೀವನ ನಡೆಸುತ್ತಿದ್ದಾರೆ. ಮದುವೆ, ಹಬ್ಬ, ಹುಣ್ಣಿಮೆಗಳೂ ನಡೆಯುತ್ತಿವೆ. ನಾವು ಶಿಬಿರವನ್ನು ಪ್ರವೇಶಿಸುತ್ತಲೇ ಗಂಗೆಯನ್ನು ತುಂಬಿಕೊಂಡು ಮಂಗಳವಾದ್ಯಗಳೊಡನೆ ಮೆರವಣಿಗೆ ಹೊರಟ ಮದುವೆಯ ದಿಬ್ಬಣ ವೊಂದರ ದರ್ಶನವಾಯಿತು. ಮದುವೆಗೆಂದು ಹೆಚ್ಚಿಗೆ ರೇಷ್ಮ ಕೊಡುತ್ತಾರೆ.

## ಜನರ ಮನೋಭಾವ

ಮೊದಲು ಬಂದಾಗ ಜನ ಕಂಗೆಟ್ಟಿದ್ದರು. ಬೆಂಕಿ—ಲೂಟಿ——ಹೆಂಗಸರು ಮಕ್ಕಳ ಮೇಲಿನ ಅತ್ಯಾಚಾರ—ನನ್ನವರೆನ್ನುವವರ ಕೊಲೆಯನ್ನು ಕಣ್ಣಾರೆ ಕಂಡು ಅನೇಕರಿಗೆ ಬುದ್ಧಿಯೇ ವಿಕಲ್ಪವಾಗಿತ್ತು. ಕೆಲವು ಮಕ್ಕಳಿಗೆ ನಾನು ಯಾರು, ತನ್ನವರು ಯಾರು ಎಂದು ಹೇಳಲು ಸಹ ಬಾಯಿ ಇರಲಿಲ್ಲವಂತೆ! ದಿಕ್ಕುಗಾಣದ ಹುಚ್ಚರಂತೆ ಸ್ತಂಭಿತ ರಾಗಿದ್ದರಂತೆ. ಈಗ ಕ್ರಮೇಣ ಆ ಮನಸ್ಸಿನ ದುಗುಡವು ಹೋಗುತ್ತಿದೆ. ಅನಾಥರಾದರೂ, ನಿರಾಶ್ರಿತರಾದರೂ ಮಕ್ಕಳ ಮುಖದಲ್ಲಿ ಒಂದು ಹೊಸ ಬಾಳಿನ ನಗೆಯ ಅಂಕುರವಿದೆ. ನಮ್ಮನ್ನು ಕಂಡೊಡನೆ 'ಜಯ ಹಿಂದ' ಘೋಷ! ತಾವು ಮಾಡಿದ ಬೊಂಬೆಗಳು, ಹಕ್ಕಿಗಳು, ಪ್ರಾಣಿಗಳನ್ನು ತೋರಿಸುವ ದೃಶ್ಯ, ತೂಗುಮಣಿ ಉಯ್ಯಾಲೆಗಳ ಮೇಲೆ ನಿರ್ಭಯರಾಗಿ ಸ್ವಚ್ಛಂದತೆಯಿಂದಿರುವ ಆಟ ಆಡುವ ದೃಶ್ಯ—ಇವನ್ನು ನೋಡಿದರೆ ಅವರನ್ನು ನೋಡಿಕೊಳ್ಳಲು ಸರ್ವವ್ಯಾಪಿ ಸರಕಾರ ಒಂದಿದೆ ಎಂಬ ಮನೋಧೈರ್ಯ ಮೂಡಿದಂತೆ ಕಾಣುತ್ತದೆ. ಶಿಶು ಪೋಷಣೆ ಕೇಂದ್ರ, ಸೆಂಟ್ ಜಾನ್ಸ್ ಅಂಬ್ಯುಲನ್ಸ್, ಮಹಿಳಾ ಸೇವಾ ದಳ, ತಾತಾ ಇನ್‌ಸ್ಟಿಟ್ಯೂಟನ ಸಹೋದರಿಯರು—ಸ್ತ್ರೀಯರು ಮಕ್ಕಳಲ್ಲಿ ಈ ಭಾವನೆ ಮೂಡುವಂತೆ ಮಾಡಲು ಬಹುಮಟ್ಟಿಗೆ

ಕಾರಣರು. ಅವರ ಅಮೋಘ ನಿಸ್ವಾರ್ಥ ಸೇವೆ ಸ್ತುತ್ಯವಾದುದು. ಮನೆಮಠ ಆಪ್ತೇಷ್ಟರನ್ನು ಕಳೆದುಕೊಂಡು ಅನಾಥರಾಗಿದ್ದ ಸ್ತ್ರೀಯರು, ಯುವತಿಯರು—ಭಯ ಮರೆತು, ಉಪಯುಕ್ತ ಕೆಲಸ ಕಾರ್ಯಗಳಲ್ಲಿ ತೊಡಗಿದ್ದಾರೆ. ಕೆಲವರು ದಾದಿಯರಾಗಿ ಆಸ್ಪತ್ರೆಯಲ್ಲಿ ಶುಶ್ರೂಷೆ ಮಾಡುತ್ತಿದಾರೆ. ಅನೇಕರು ಶಾಲೆಗಳಲ್ಲಿ ಉಪಾಧ್ಯಾಯಿನಿಯರಾಗಿದ್ದಾರೆ. ಇನ್ನು ಕೆಲವರು ನೇಯ್ಗೆ, ಕಸೂತಿ ಮುಂತಾದ ಎಲ್ಲ ಕೆಲಸಗಳಲ್ಲಿ ತೊಡಗಿದ್ದಾರೆ. ಮಾನವತೆಯನ್ನು ಮರೆತ ಕ್ರೂರ ಪ್ರಪಂಚದಲ್ಲಿ ತಮಗೆ ಇನ್ನೂ ಒಂದು ಸ್ಥಾನವಿದೆ ಎಂಬ ಆಶಾಭಾವನೆ ಇವರಲ್ಲಿ ಮೂಡುತ್ತಿದೆ.

ಅನಾಥರ ಶಿಬಿರದಲ್ಲಿ ೧೫೦ ಜನ ಅನಾಥ ಮಹಿಳೆಯರೂ ೧೫೦ ಜನ ಅನಾಥ ಮಕ್ಕಳೂ ಇದ್ದಾರೆ. ಮಕ್ಕಳನ್ನು ದತ್ತಕ ತೆಗೆದುಕೊಳ್ಳಲು ೧೫೦ಕ್ಕೆ ಮೀರಿ ಅರ್ಜಿಗಳು ಬಂದಿವೆಯಂತೆ! ಮುದುಕರನ್ನು ಬಿಟ್ಟರೆ ಉಳಿದ ಯುವತಿಯರನ್ನು ಮದುವೆಯಾಗಲು ಯುವಕರು ಸಹ ತಕ್ಕ ಸಂಖ್ಯೆಯಲ್ಲಿ ಸಿದ್ಧರಿದ್ದಾರೆ. ಆದರೆ ಈ ಅನಾಥ ಮಕ್ಕಳನ್ನು, ಸ್ತ್ರೀಯರನ್ನು ಅವರ ಸಂಬಂಧಿಗಳು ಎಲ್ಲಾದರೂ ಇದ್ದರೆ ಅವರಿಗೆ ತಲುಪಿಸುವ ಯತ್ನಮಾಡಬೇಕು. ಇದು ದೊಡ್ಡ ಸಮಸ್ಯೆ. ಅದಕ್ಕೇ ಪ್ರತ್ಯೇಕ ವ್ಯವಸ್ಥೆ ಇದೆ. ಪ್ರತಿಯೊಂದು ಶಿಬಿರದಲ್ಲಿಯ ಅನಾಥ ಸ್ತ್ರೀಯರ—ಮಕ್ಕಳ ಫೋಟೋ ತೆಗೆದು ದಿಲ್ಲಿಯ ಕೇಂದ್ರ ಕಚೇರಿಗೆ ಕಳುಹಿಸುತ್ತಾರೆ. ಅದನ್ನು ಕೇಂದ್ರ ಕಚೇರಿಯಲ್ಲಿ ಮಾತ್ರವಲ್ಲದೆ ಪ್ರತಿಯೊಂದು ಶಿಬಿರಕ್ಕೆ ಪುನಃ ಪ್ರದರ್ಶನಕ್ಕೆಂದು ಕಳಿಸುತ್ತಾರೆ. ಎಲ್ಲಾದರೂ ಯಾರಾದರೂ ಗುರ್ತು ಹಿಡಿದರೆ ವಿಚಾರಮಾಡಿ ಖಂಡಿತ ವಾದಾಗ ಆ ಮಕ್ಕಳು ಅಥವಾ ಸ್ತ್ರೀಯರನ್ನು ಅವರ ಸಂಬಂಧಿಗಳಿಗೆ ಒಪ್ಪಿಸುತ್ತಾರೆ. ಉಳಿದವರನ್ನು ಯಾವುದಾದರೂ ಸಮಾಜ ಸೇವಾ ಕಾರ್ಯಕ್ಕೆ ಅನುಗೊಳಿಸುವ ಶಿಕ್ಷಣ ಕೊಡಲಾಗುತ್ತದೆ. ಚರಕಗಳನ್ನು ಕೊಟ್ಟು ನೂಲು ತೆಗೆಯುವದನ್ನೂ ಕಲಿಸುತ್ತಾರೆ.

### ಆಡಳಿತ ವ್ಯವಸ್ಥೆ

ಈ ಶಿಬಿರದ ಆಡಳಿತವೆಲ್ಲ ಶಿಬಿರಾಧಿಪತಿ ಕರ್ನಲ್ ಪುರಿಯವರ ನೇತೃತ್ವದಲ್ಲಿದೆ. ಅವರಿಗೆ ಸಹಾಯಕವಾಗಿ ಕೇಂದ್ರ ವೆಲ್ಫೇರ

ಅಧಿಕಾರಿಗಳಾಗಿ ಕರ್ನಲ್ ಬಸು ಅವರಿದ್ದಾರೆ. ಅವರಿಗೆ ಸಹಾಯಕ ಅಧಿಕಾರಿಗಳು, ನಗರಾಧಿಪತಿಗಳು, ದಾದಿಯರು ಇದ್ದಾರೆ. ಇವರು ಗಳದೇ ದೊಡ್ಡದೊಂದು ಕಚೇರಿ ಇವೆ. ಸೇವೆಗಾಗಿ ಬಂದ ೧೯ ಸಂಸ್ಥೆಗಳಾದರೂ ದಿಲ್ಲಿಯ ಕೇಂದ್ರ(United Relief Council)ನ ಸಲಹೆಗಳಿಗನುಸಾರವಾಗಿ ಹೊಂದಿಕೊಂಡು ಕೆಲಸ ಮಾಡುತ್ತಿವೆ. ಅದಕ್ಕೆ ಸತಿ ಮೌಂಟ್ ಬ್ಯಾಟನರು ಅಧ್ಯಕ್ಷಿಣಿಯರು. ಕೇಂದ್ರ ಸಮಿತಿಯಲ್ಲಿ ಪಂಡಿತ ನೆಹರು, ಬಾಬು ರಾಜೇಂದ್ರ ಪ್ರಸಾದ, ನಿಯೋಗಿ ಮುಂತಾದ ನಾಯಕರೂ ಇದ್ದಾರೆ. ರಕ್ಷಣೆ ವ್ಯವಸ್ಥೆಗೆಂದು ೧೦೦ ಜನರ ಒಂದು ಸೈನ್ಯ ಶಾಖೆಯು ಕಂಪನಿಯೂ, ೬೦-೭೦ ಜನರ ಪೋಲೀಸ ಪಡೆಯೂ ಇದೆ. ನಿರಾಶ್ರಿತರದೇ ಒಂದು ಸೇವಾ ಪಡೆ ಇದೆ. ಕೇಂದ್ರ ಕಚೇರಿಯಿಂದ ಉಪನಗರಗಳ ಭಾಗಗಳಿಗೆ ಓಡಾಡಲು ಬಸ್ ವ್ಯವಸ್ಥೆ ಮಾಡಿದ್ದಾರೆ. ದಿಲ್ಲಿಗೂ ಶಿಬಿರಕ್ಕೂ ಉಪನಗರಗಳಿಗೂ ಟೆಲಿಫೋನ್ ವ್ಯವಸ್ಥೆ ಇದೆ. ಶಿಬಿರಕ್ಕೆಲ್ಲ ಕಡೆ ವಿದ್ಯುದ್ದೀಪವಿದೆ.

## ಮುಂದಿನ ಸಮಸ್ಯೆಗಳು

ಇಷ್ಟೆಲ್ಲ ವ್ಯವಸ್ಥೆ ಇದ್ದರೂ ಜಟಿಲ ಸಮಸ್ಯೆಗಳಿಲ್ಲವೆಂದಲ್ಲ. ನಿರಾಶ್ರಿತರಲ್ಲಿ ನಾನಾ ಬಗೆಯ, ನಾನಾ ಮನೋಭಾವದ ಜನರಿದ್ದಾರೆ. ಸಾಧು ಜನರ ಜತೆಯಲ್ಲಿ ಸಮಾಜ ಕಂಟಕರೂ, ದಂಡನೆಗೊಳಗಾಗಿ ಶಿಕ್ಷೆ ಅನುಭವಿಸುತ್ತಿದ್ದ ಪುಂಡರೂ ಬಂದಿದ್ದಾರೆ. ನೀತಿ ಪತನದ ನಿದರ್ಶನಗಳು ಇಲ್ಲವೆಂದಲ್ಲ! ಈಗಿನ ಮುಖ್ಯ ಪ್ರಶ್ನೆ....ಮುಂದೇನು? ಎಂದು. ಇದುವರೆಗೆ ನಿರಾಶ್ರಿತರಿಗೆ ಆಶ್ರಯ ಕೊಡುವ ಕೆಲಸವಾಗಿತ್ತು— ಆ ಕೆಲಸ ಬಹುಮಟ್ಟಿಗೆ ಮುಗಿದಿದೆ. ಏನು ಕೆಲಸ ಮಾಡುತ್ತೀರಿ ಎಂದು ಕೆಲವು ನಿರಾಶ್ರಿತರನ್ನು ನಾವು ಕೇಳಿದಾಗ—"ಊಟ ಮಾಡುವದು ತಿರುಗುವದು" ಎಂದು ಅನೇಕರು ಹೇಳಿದರು. ಕೆಲಸವಿಲ್ಲದವರನ್ನು ಮೊದಲು ಕೆಲಸಕ್ಕೆ ಹಚ್ಚಬೇಕು. ಈಗ ತಡಮಾಡಿದರೆ ಅನೀತಿ ತಲೆದೋರೀತು. ಅಂಥವರ ಸಂಖ್ಯೆಯೇ ಈಗ ಹೆಚ್ಚು.

ಎರಡನೆಯದಾಗಿ ಬೇಸಗೆ ಬರುತ್ತಿದೆ. ಚಳಿಗಾಲದಲ್ಲಿ ಡೇರೆಗಳಲ್ಲಿ—ಹಗಲಿನಲ್ಲಿ ಬಯಲಿನಲ್ಲಿ ಕಾಲ ಕಳೆಯುತ್ತಿದ್ದಾರೆ. ಬೇಸಗೆಯಲ್ಲಿ ಆ ರೀತಿ ಜೀವಿಸಲು ಸಾಧ್ಯವಿಲ್ಲ. ಬೇಸಗೆಯಲ್ಲಿ ಉಷ್ಣತೆ ೧೧೦-೧೨೦ ಡಿಗ್ರಿಯವರೆಗೂ ಏರುತ್ತದೆ.

ಕೆಲವರು ಹತ್ತಿರದ ಮಾವಿನ ತೋಪಿನಲ್ಲಿ ಕಾಲಕಳೆಯಬಹುದಾದರೂ ಎಲ್ಲರಿಗೂ ಅಲ್ಲಿ ಜಾಗವಿಲ್ಲ. ಈಗಾಗಲೇ ದಿನವೂ ಒಂದೆರಡು ಜನರಿಗೆ ಹಾವುಗಳು ಕಚ್ಚುತ್ತಿವೆ. ಶಿಬಿರದ ಸುತ್ತಲೂ ೧೦೦ ಗಜದ ದೂರ ಗಿಡಗಂಟಿಗಳನ್ನು ಕಡಿದು, ಇಲಿಯ ಬಿಲಗಳಿಗೆ ಸೈನೊಗ್ಯಾಸ ಮಾಡಬೇಕೆಂದಿದ್ದಾರೆ.

ಮುಖ್ಯ ಪ್ರಶ್ನೆ—ಅಷ್ಟು ಜನರಿಗೆ ವಸತಿಯನ್ನು ಕಲ್ಪಿಸುವುದು. ಧೂಳಿನ ಬಿರುಗಾಳಿಯಿಂದ, ಬಿಸಲಿನ ಬೇಗೆಯಿಂದ ಕಾಪಾಡುವುದು. ಬೇಸಗೆಯ ಹಿಂದೆಯೇ ಮಳೆಗಾಲ ಆರಂಭವಾಗುತ್ತದೆ. ಮಳೆಗಾಲದಲ್ಲಿ ಕುರುಕ್ಷೇತ್ರವೆಲ್ಲ ನೀರಿನಲ್ಲಿ ಮುಳುಗುತ್ತದೆ. ಮಳೆಗಾಲದಲ್ಲಂತೂ ಅಲ್ಲಿ ಇರಲು ಸಾಧ್ಯವೇ ಇಲ್ಲ.

ಎರಡನೆಯ ಪ್ರಶ್ನೆ—ಶಿಬಿರದಲ್ಲಿ ಸಾಮಾಜಿಕ ಅನೀತಿಯನ್ನು ತಪ್ಪಿಸುವುದು. ಮೂರನೆಯದಾಗಿ ಶಿಬಿರದ ರಕ್ಷಣೆಯ ವ್ಯವಸ್ಥೆ. ಈಗಿರುವ ಪೋಲಿಸು ಮತ್ತು ಮಿಲಿಟರಿ ಪಡೆ ಏನೂ ಸಾಲದು. ಎಲ್ಲರೂ ನಿರಾಶ್ರಿತರಾದರೂ ಅಲ್ಪ ಕಾರಣಗಳಿಗಾಗಿ ಪರಸ್ಪರ ವೈಮನಸ್ಸುಗಳು ಉದ್ಭವಿಸುತ್ತಲೇ ಇವೆ. ಒಮ್ಮೊಮ್ಮೆ ಮಿಲಿಟರಿ ಸಹಾಯದಿಂದಲೇ ಜನರನ್ನು ಹತೋಟಿಗೆ ತರಬೇಕಾಗಿದೆ. ನೊಂದ ಜನರು ಉದ್ವೇಗಗೊಂಡಾಗ ಏನು ಮಾಡುವದಕ್ಕೂ ಹಿಂಜರಿಯುವುದಿಲ್ಲ.

ಆದಷ್ಟು ಜನರನ್ನು ಬೇರೆ ಕಡೆಗೆ ಕಳುಹಿಸುವುದು ಉತ್ತಮ. ಜನವರಿ ತಿಂಗಳಲ್ಲಿ ೪೭೦೦೦ ಜನ ನಿರಾಶ್ರಿತರು ಬೇರೆ ಕಡೆಗೆ ಹೋದರು. ಫೆಬ್ರವರಿಯಲ್ಲಿ ಯಾರೂ ಹೋಗಿಲ್ಲ. ಆಗಾಗ ಇನ್ನೂ ನಿರಾಶ್ರಿತರು ಬರುತ್ತಲೇ ಇದ್ದಾರೆ. ಆಡಳಿತ ವರ್ಗದಮೇಲೆ ಕೆಲವು ದೂರುಗಳು, ಅಸಮ್ಪ್ರತಿಗಳು ಕೇಳಿಬಂದವು. ಸೇವಾ ಸಂಸ್ಥೆಗಳಲ್ಲೂ ಪರಸ್ಪರ ಸ್ವಲ್ಪ

ತಿಕ್ಕಾಟವಿದೆ. ಆದರೆ ಈಗಿನ ಇಂತಹ ಪ್ರಕೃತಿವೈಪರೀತ್ಯದ ಜೀವನ ವ್ಯವಸ್ಥೆಯಲ್ಲಿ ಒಂದು ಬಿಗಿ ಇರಬೇಕಾದರೆ ಸ್ವಲ್ಪ ದರ್ಪವೂ—ಒಮ್ಮತವೂ ಅತ್ಯವಶ್ಯಕ. ಒಟ್ಟಿನಲ್ಲಿ ಕುರುಕ್ಷೇತ್ರ ಶಿಬಿರದ ಅಧಿಕಾರಿಗಳು ವಂದನಾರ್ಹರು.

ನಮ್ಮನ್ನೂ ಬಹಳ ಸೌಜನ್ಯದಿಂದ, ಆದರದಿಂದ ಕಂಡರು. ಶಿಬಿರದ ಜೀವನವನ್ನೆಲ್ಲ ತೋರಿಸಿದರು. ತಮ್ಮ ಕಷ್ಟ-ಸುಖಗಳನ್ನು ತಿಳಿಸಿದರು. ಅವರೂ ನಿರಾಶ್ರಿತರಂತೆ ಡೇರೆಗಳಲ್ಲಿ—ಧೂಳಿನಲ್ಲಿ ಕುಳಿತು ಜಾತ್ರೆಗಳಲ್ಲಿ ಕೆಲಸಮಾಡುವವರಂತೆ ಹಗಲಿರುಳೂ ದುಡಿಯುತ್ತಿದ್ದಾರೆ. ಕುರುಕ್ಷೇತ್ರದ ನಿರಾಶ್ರಿತರು ಜೀವನವನ್ನು ಕ್ರಮಗೊಳಿಸಿ, ಧನ್ಯತೆಯನ್ನು ಪಡೆಯಲೆಂದು ನಮ್ಮ ಬಯಕೆ!

---

## ಭಾರತ ರಾಜ್ಯಾಂಗ

ನಾನು ಮೊದಲು ಭಾಗವಹಿಸಿದ್ದು ಭಾರತ ರಾಜ್ಯಾಂಗ ರಚನೆಯ ಸಭೆಯ ನಾಲ್ಕನೆಯ ಅಧಿವೇಶನದಲ್ಲಿ. ವಿಮಾನದಲ್ಲಿ ಮದ್ರಾಸಿನ ಸಹೋದ್ಯೋಗಿ ಸದಸ್ಯರು ಮಿಸ್ಟರ್ ವಿಲ್ಸನ್ನರ ಪರಿಚಯವಾಯಿತು. ವಿಮಾನದ ನಿಲ್ದಾಣದಿಂದ ಕರ್ಜನ್ ರೋಡಿನಲ್ಲಿ ಮುಖ್ಯವಾಗಿ ಸಭೆಯ ಸದಸ್ಯರಿಗಾಗಿಯೇ ಏರ್ಪಡಿಸಿರುವ ಕಾನ್ಸ್ಟಿಟ್ಯೂಷನ್ ಹೌಸಿಗೆ ನಾಲ್ಕು ಮೈಲು. ಕಟ್ಟಡದಲ್ಲಿ ೧೪೦ ಕೊಠಡಿಗಳಿವೆ. ಇದು ಯುದ್ಧ ಕಾಲದಲ್ಲಿ ಅಮೇರಿಕನ್ ಸೈನ್ಯ ಇಲಾಖೆಯ ಸಭಾ ಅಧಿಕಾರಿಗಳ ವಾಸ ಸ್ಥಾನವಾಗಿತ್ತು. ಈಗ ರಾಜ್ಯಾಂಗ ಸದಸ್ಯರ ವಸತಿಗೃಹವಾಗಿದೆ. ಅಲ್ಲಿಯೇ ಊಟದ ಮನೆ—ವಿಶ್ರಾಂತಿಗೃಹ—ಅಂಚೆ ಕಚೇರಿ—ಆಸ್ಪತ್ರೆ ಎಲ್ಲ ಸೌಕರ್ಯಗಳೂ ಇವೆ.

ಮಾರನೆಯ ದಿನ ಸಭೆಯ ಕಚೇರಿಗೆ ಹೋದರೆ ಕಾರ್ಯದರ್ಶಿ ಶ್ರೀ ಎಚ್. ವರದರಾಜ ಅಯ್ಯಂಗಾರ್ಯರೆ ಮೊದಲಾಗಿ ಹಲವರು ಕನ್ನಡಿಗರು! ನಾನು ಪರಸ್ಥಳಕ್ಕೆ ಬಂದಿದ್ದೇನೆ ಎಂಬ ಭಾವನೆಯೇ ಬರಲಿಲ್ಲ.

೧೪-೭-೪೭ನೆಯ ದಿನ ಇಲ್ಲಿಯ ಸಭೆ ಆರಂಭವಾಗಬೇಕಿತ್ತು. ೧೩-೭-೪೭ನೆಯ ಸಂಜೆ 'ಕಾನ್ಸ್ಟಿಟ್ಯೂಷನ್ ಹೌಸ್'ನಲ್ಲೇ ಕಾಂಗ್ರೆಸ್ ಪಕ್ಷದ ಸಭೆ. ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಆಚಾರ್ಯ ಕೃಪಲಾನಿಯವರು ಸಭೆಯ ಅಧ್ಯಕ್ಷರು. ಶ್ರೀಗಳಾದ ಪಂಡಿತ ಜವಹರಲಾಲ್ ನೆಹ್ರೂ, ಸರದಾರ್ ಪಟೇಲ್, ಗೋಪಾಲಸ್ವಾಮಿ ಅಯ್ಯಂಗಾರ್, ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ಮುಂತಾಗಿ ಕಾಂಗ್ರೆಸ್ ಪಕ್ಷದ ಸದಸ್ಯರೆಲ್ಲರೂ ಸಭೆಗೆ ಬರುತ್ತಿದ್ದರು. ಈಗ ಗವರ್ನರ್ ಜನರಲ್ ಆಗಿರುವ ಶ್ರೀ ರಾಜಗೋಪಾಲಾಚಾರಿಯವರು, ದಿವಂಗತ ಸರೋಜಿನಿ ದೇವಿ, ಬಂಗಾಲದ ಗವರ್ನರ್ ಶ್ರೀ ಕಟ್ಜು ಸಭೆಯಲ್ಲಿರುತ್ತಿದ್ದರು. ಎಲ್ಲ ವಿಷಯಗಳೂ ಮೊದಲು ಕಾಂಗ್ರೆಸ್ ಪಕ್ಷದ ಸಭೆಯಲ್ಲಿ ಚರ್ಚೆಯಾಗಿ ಇತ್ಯರ್ಥವಾಗಬೇಕು. ಅನಂತರ ಅದು ರಾಜ್ಯಾಂಗ ಸಭೆಯ ಮುಂದೆ ಬಂದು ಚರ್ಚೆಯಾಗಿ, ತೀರ್ಮಾನವಾಗಬೇಕು. ಈಗಲೂ ನಿತ್ಯ ಅದೇ ರೀತಿ ನಡೆಯುತ್ತಿದೆ.

೧೪-೮-೪೭ರಲ್ಲಿ ಆರಂಭವಾದ ಅಧಿವೇಶನ ನಾಲ್ಕನೆಯದೆಂದು ತಿಳಿಸಿದ್ದೇನೆ. ಮೊದಲನೆಯ ಅಧಿವೇಶನವು ಸಭೆಯ ಹಿರಿಯ ಸದಸ್ಯರಾದ ಬಿಹಾರಿನ ಶ್ರೀ ಸಚ್ಚಿದಾನಂದ ಸಿಂಹರ ಅಧ್ಯಕ್ಷತೆಯಲ್ಲಿ ೯-೧೨-೪೬ರಲ್ಲಿ ಆರಂಭವಾಯಿತು. ಬಾಬು ರಾಜೇಂದ್ರ ಪ್ರಸಾದರು ಅಧ್ಯಕ್ಷರಾಗಿ ಆಯ್ಕೆ ಆದುದು ಆ ಅಧಿವೇಶನದಲ್ಲೇ. ಇದೇ ಅಧಿವೇಶನದಲ್ಲಿ ಸಭೆ ತನ್ನ ಕೆಲಸವನ್ನು ನಡೆಸಲು ಅವಶ್ಯಕವಾದ ಹಲವು ಸಮಿತಿಗಳನ್ನು ನಿರ್ಮಿಸಿತು.

ಎರಡನೆಯ ಅಧಿವೇಶನ ೨೦-೧-೧೯೪೭ ರಿಂದ ೨೫-೧-೧೯೪೭ರ ವರೆಗೆ ಮೂರನೆಯ ಅಧಿವೇಶನ ೨೮-೪-೪೭ರಿಂದ ೨-೫-೧೯೪೭ರವರೆಗೂ ನಡೆದುವು. ಅವುಗಳಲ್ಲಿ ಕೆಲವು ಮುಖ್ಯ ಸಮಿತಿಗಳು ಏರ್ಪಟ್ಟು, ಆರಂಭದ ಕೆಲವು ವರದಿಗಳು ಅಂಗೀಕೃತವಾದುವು. ನಾಲ್ಕನೆಯ ಅಧಿವೇಶನವು ಸೇರುವ ಹೊತ್ತಿಗೆ ೩-೬-೪೭ರಲ್ಲೇ ಭಾರತ ವಿಭಜನೆಯಾಗಬೇಕೆಂದು ಒಪ್ಪಲಾಗಿತ್ತು. ಈ ಒಪ್ಪಂದದ ಪ್ರಕಾರ ಸಭೆಯ

ಕೆಲವು ಸದಸ್ಯರ ಸ್ಥಾನಗಳು ತೆರಪಾಗಿ ಹೊಸ ಚುನಾವಣೆಗಳಾದವು. ಮೊಟ್ಟ ಮೊದಲನೆಯದಾಗಿ ಭಾರತದ ಎಲ್ಲ ಪ್ರಾಂತಗಳ ಮುಸ್ಲಿಂ ಸದಸ್ಯರೂ ಸಭೆಗೆ ಬಂದು ಭಾಗವಹಿಸಿದರು. ಮೈಸೂರು, ಗ್ವಾಲಿಯರ್ ಪ್ರತಿನಿಧಿಗಳು ಮೊದಲ ಬಾರಿ ಭಾಗವಹಿಸಿದ್ದೂ ಇದೇ ಅಧಿವೇಶನದಲ್ಲಿ. ೧೪-೭-೪೭ನೆಯ ದಿನ ೭೯ ಜನ ಸದಸ್ಯರು ಪ್ರಮಾಣವಚನ ತೆಗೆದು ಕೊಂಡರು.

ರಾಜ್ಯಾಂಗ ಸಭೆ ನಡೆಯುತ್ತಿರುವುದು ಮೊದಲು ಶಾಸನ ಸಭೆಗಳ ಗ್ರಂಥ ಭಂಡಾರವಾಗಿದ್ದ ಭವನದಲ್ಲಿ; ಈ ಭವನ ಪಾರ್ಲಿಮೆಂಟ್ ಭವನದ ಕೇಂದ್ರದಲ್ಲಿ ಇದೆ. ಇದು ಗೋಳಾಕಾರವಾಗಿದೆ. ಅಧ್ಯಕ್ಷರ ಪೀಠಕ್ಕಾಗಿ ಎತ್ತರವಾದ ವೇದಿಕೆಯ ಮೇಲೆ ಒಂದು ಸುಂದರವಾದ ಮಂಟಪವನ್ನು ನಿರ್ಮಿಸಿದ್ದಾರೆ. ಅಲ್ಲಿ ಪಕ್ಕದಲ್ಲಿ ಅವರ ಜತೆಗೆ ಒಮ್ಮೊಮ್ಮೆ ರಾಜ್ಯಾಂಗ ರಚನಾ ಸಭೆಯ ಸಲಹೆಗಾರರಾದ ಬೆನಗಲ್ ನರಸಿಂಗರಾಯರು ಕುಳಿತುಕೊಳ್ಳುತ್ತಿದ್ದರು. ಅಧ್ಯಕ್ಷರ ಮುಂದುಗಡೆಗೆ ಕಾರ್ಯದರ್ಶಿಗಳು, ಸಹಕಾರ್ಯದರ್ಶಿಗಳಿಗೆ ಸ್ಥಾನ. ಎರಡು ಪಕ್ಕದಲ್ಲೂ ಭಾಷಣಕಾರರಿಗೆ ಧ್ವನಿವಾಹಕ ಯಂತ್ರಗಳು. ಕಾರ್ಯ ದರ್ಶಿಗಳ ಎದುರಿನಲ್ಲಿ ವರದಿಗಾರರು. ಅಧ್ಯಕ್ಷರ ಎದುರಿಗೆ ಸದಸ್ಯರಿಗೆ ಗೋಲಾಕಾರವಾಗಿ ಏರ್ಪಾಟಾದ ಆಸನಗಳು. ಮೊದಲನೆಯ ಸಾಲಿನಲ್ಲಿ ಕೇಂದ್ರ ಸರಕಾರದ ಮಂತ್ರಿಗಳು, ಪ್ರಾಂತಗಳ ಮತ್ತು ದೇಶೀಯ ಸಂಸ್ಥಾನಗಳ ಪ್ರಧಾನ ಸಚಿವರುಗಳು, ಕಾಂಗ್ರೆಸ್ ಅಧ್ಯಕ್ಷರು ಮುಂತಾದವರಿಗೆ ಸ್ಥಾನ. ಅಧ್ಯಕ್ಷರ ಬಲದ ಕೊನೆಯಲ್ಲಿ ಮದ್ರಾಸ್ ಸದಸ್ಯರು, ಎಡದ ಕೊನೆಯಲ್ಲಿ ಅಸ್ಸಾಂ ಸದಸ್ಯರು, ಮಧ್ಯೆ ಮುಂಬಯಿ, ಸಂಯುಕ್ತಪ್ರಾಂತ, ಮಧ್ಯಪ್ರಾಂತ, ಬಂಗಾಲ, ಬಿಹಾರ ಮತ್ತು ಸಂಸ್ಥಾನಗಳ ಪ್ರತಿನಿಧಿಗಳು. ನಾವು ಸಭೆಗೆ ಹೋದಾಗ ೨೯೨ ಜನ ಸದಸ್ಯರಿದ್ದರು. ಈಗ ಕಾಶ್ಮೀರದ ಪ್ರತಿನಿಧಿಗಳೂ ಸೇರಿ ೨೦೨ ಜನ ಪ್ರತಿನಿಧಿಗಳಿದ್ದಾರೆ. ಈಗ ಸಭೆಯಲ್ಲಿ ಭಾಗವಹಿಸದೆ ಇರುವವರೆಂದರೆ ಹೈದರಾಬಾದ್ ಮತ್ತು ಭೂಪಾಲ್ ಪ್ರತಿನಿಧಿಗಳು ಮಾತ್ರ.

ಈ ಅಧಿವೇಶನದಲ್ಲಿ ಸಭೆಯ ಸಲಹಾಸಮಿತಿಯೂ ಮೂಲಭೂತ ಹಕ್ಕುಗಳ ಸಮಿತಿಯನ್ನೂ ಅಲ್ಪಸಂಖ್ಯಾತರ ಸಮಿತಿಯನ್ನೂ ಗುಡ್ಡಗಾಡು ಜನರ ಸಮಿತಿಯನ್ನೂ ನೇಮಿಸಲಾಯಿತು. ಇಂಡಿಯನ್ ಇಂಡಿಪೆಂಡೆನ್ಸ್ ಆಕ್ಟ್ ಪ್ರಕಾರ ರಾಜ್ಯಾಂಗ ಸಭೆಯೇ ಭಾರತದ ತಾತ್ಕಾಲಿಕ ಶಾಸನ ಸಭೆಯೂ ಆಯಿತು. ಕೇಂದ್ರ ಮತ್ತು ಪ್ರಾಂತ ಸರ್ಕಾರಗಳ ಮುಖ್ಯ ತತ್ವಗಳನ್ನು ನಿರೂಪಿಸಲು ನಿಯಮಿಸಿದ ಸಮಿತಿಗಳು ತಮ್ಮ ವರದಿಗಳನ್ನು ಒಪ್ಪಿಸಿದವು. ಆ ವರದಿಗಳ ಮೇಲ್ಗೆ ಚರ್ಚೆ ನಡೆದು, ಆ ವರದಿಯ ವಿವರಗಳು ಕ್ರಮವಾಗಿ ಸಭೆಯಲಿ ಚರ್ಚೆಯಾಗಿ ಅಂಗೀಕಾರವಾದವು. ೨೨-೭-೪೭ನೆಯ ದಿನ ಅಶೋಕ ಚಕ್ರಲಾಂಛಿತವಾದ ಭಾರತದ ನೂತನ ರಾಷ್ಟ್ರಧ್ವಜವನ್ನೂ ಸಭೆ ಅಂಗೀಕರಿಸಿತು. ಭಾರತದ ವಿಭಜನೆಯ ಫಲವಾದ ನೂತನ ಪರಿಸ್ಥಿತಿಗೆ ಅನುಸರಿಸಿ, ಸಭೆಯ ನಿಯಮಗಳೂ ರೂಪಾಂತರ ಹೊಂದಿ, ಭಾರತದ ಸ್ವಾತಂತ್ರ್ಯ ಘೋಷಣೆಗೆ ೧೪-೮-೪೭ನೆಯ ದಿನ ಸೇರಲೆಂದು ೩೧-೭-೪೭ನೆಯ ದಿನ ಸಭೆ ಮುಂದುವರಿಯಿತು.

ಐದನೆಯ ಅಧಿವೇಶನವು ಆರಂಭವಾದುದು ಚರಿತ್ರಾರ್ಹವಾದ ೧೪-೮-೪೭ನೆಯ ರಾತ್ರಿ ೧೧ ಗಂಟೆಯಲ್ಲಿ. ರಾತ್ರಿ ಹನ್ನೆರಡು ಹೊಡೆಯುತ್ತಲೆ ಜನಗಣಮನ ಗೀತೆ. ಅನಂತರ ಸ್ವಾತಂತ್ರ್ಯ ಘೋಷಣೆ, ಪಂಡಿತ ಜವಹರಲಾಲರು ಮಹಾಪ್ರಧಾನರಾಗಿ ಭಾರತದ ನೂತನ ಸರ್ಕಾರವನ್ನು ರಚಿಸಬೇಕೆಂಬ ನಿರ್ಣಯ. ೧೫-೮-೪೭ರ ಬೆಳಿಗ್ಗೆ ಲಾರ್ಡ್ ಮೌಂಟ್‌ಬ್ಯಾಟನ್‌ರಿಂದ ಭಾಷಣ, ರಾಷ್ಟ್ರಧ್ವಜಾರೋಹಣ, ಅನಂತರ ೨೦ ರಿಂದ ೩೧ರ ವರಗೆ ಪುನಃ ಪ್ರಾಂತ ಮತ್ತು ಒಕ್ಕೂಟ ಸರ್ಕಾರಗಳ ಅಧಿಕಾರ ವ್ಯಾಪ್ತಿಯ ಸಲಹೆಗಳ ಅಂಗೀಕಾರ. ಒಕ್ಕೂಟ ಸರ್ಕಾರಕ್ಕೂ ಇತರ ಪ್ರಾಂತಗಳು ಮತ್ತು ಸಂಸ್ಥಾನಗಳಿಗೂ ಇರಬೇಕಾದ ಹಣಕಾಸಿನ ಸಂಬಂಧವನ್ನು ನಿರ್ಧರಿಸಿ, ಸೂಕ್ತ ಸಲಹೆ ಮಾಡಲು ತಜ್ಞರ ಸಮಿತಿಯೊಂದು ಏರ್ಪಾಟಾಯಿತು. ಭಾರತ ರಾಜ್ಯಾಂಗ ರಚನೆಯ ಕರಡನ್ನು ಸಿದ್ಧಗೊಳಿಸಲು ಡಾ|| ಅಂಬೇಡ್‌ಕರ್

ಅಧ್ಯಕ್ಷತೆಯಲ್ಲಿ ಕರಡು ನಿರ್ಮಾಣ ಸಮಿತಿಯೊಂದು (Drafting Committee) ರಚನೆಯಾಯಿತು. ದೆಹಲಿ, ಕೊಡಗು, ಅಜಮೀರ್, ಮಾರ್‍ವಾಡ ಮುಂತಾದ ಚೀಫ್ ಕಮಿಷನರ್ ಪ್ರಾಂತಗಳ ರಾಜ್ಯಾಂಗ ವನ್ನು ರೂಪಿಸಲು ಒಂದು ಸಮಿತಿಯಾಯಿತು. ಈಚೆಗೆ ಭಾಷಾನುಗುಣ ಪ್ರಾಂತ ರಚನೆಯ ಪ್ರಶ್ನೆಯ ವಿಷಯ ವರದಿಮಾಡಲು 'ಥಾರ್' ಸಮಿತಿಯು ರಚನೆಯಾಯಿತು. ದೇಶೀಯ ಸಂಸ್ಥಾನಗಳಿಗೆ ಒಂದು ಮಾದರಿ ರಾಜ್ಯಾಂಗವನ್ನು ರಚಿಸಲು ಶ್ರೀ ಬೆನಗಲ್ ನರಸಿಂಗರಾಯರ ಅಧ್ಯಕ್ಷತೆಯಲ್ಲಿ ಒಂದು ಸಂಸ್ಥಾನಗಳ ಮಾದರಿ ರಾಜ್ಯಾಂಗ ರಚನಾ ಸಮಿತಿ ಏರ್ಪಾಟಾಯಿತು. ಈ ಎಲ್ಲ ಸಮಿತಿಗಳೂ ವರದಿಗಳನ್ನು ಸಿದ್ಧಮಾಡಿಕೊಟ್ಟಿವೆ. ಭಾರತದ ರಾಜ್ಯಾಂಗ ರಚನೆಯ ಕರಡಿನಲ್ಲಿ ೩೧೩ ಸೆಕ್ಷನ್‌ಗಳೂ ಎಂಟು ಪರಿಶಿಷ್ಟಗಳೂ ಇವೆ. ವರದಿಯು ಸಿದ್ಧವಾದುದು ೨೧-೨-೪೮ರಲ್ಲಿ. ಈ ಮಧ್ಯೆ ರಾಜ್ಯಾಂಗ ಸಲಹೆಗಾರ ರಾದ ಶ್ರೀ ಬೆನಗಲ್ ನರಸಿಂಗರಾಯರು ಅಮೇರಿಕ, ಐರ್ಲೆಂಡ್, ಕೆನಡಾ, ಇಂಗ್ಲೆಂಡ್ ಮುಂತಾದ ದೇಶಗಳಿಗೆ ಹೋಗಿ ಅಲ್ಲಿನ ರಾಜ್ಯಾಂಗ ತಜ್ಞರನ್ನು ಕಂಡು, ಸಂಯುಕ್ತ ರಾಜ್ಯಾಂಗ ಪದ್ಧತಿಯು ಎಲ್ಲೆಲ್ಲಿ ಹೇಗೆ ಕೆಲಸಮಾಡುತ್ತಿದೆ, ಅದರ ಕುಂದುಕೊರತೆಗಳೇನು, ಅವರ ಅನುಭವ ದಿಂದ ಭಾರತವು ಆ ಕೊರತೆಗಳನ್ನು ಹೇಗೆ ಸರಿಪಡಿಸಿಕೊಂಡು ಮುಂದು ವರಿಯಬಹುದು ಎಂಬುದನ್ನು ವಿಚಾರವಿನಿಮಯ ಮಾಡಿಕೊಟ್ಟ ಸೂಕ್ತಸಲಹೆಗಳನ್ನು ಈ ಕರಡಿನಲ್ಲಿ ಅಡಕಮಾಡಲಾಗಿದೆ. ಈಗ ಭಾರತದ ವಿಧಾನ ಸಭೆಯಲ್ಲಿ ಚರ್ಚೆಯಾಗಿ ರೂಪುಗೊಳ್ಳುತ್ತಿರುವುದು ಇದೇ ಕರಡು ಶಾಸನ. ಅದಕ್ಕೆ ೩,೭೪೯ ತಿದ್ದುಪಡಿಗಳೂ ಅವುಗಳಿಗೆ ಪುನಃ ನೂರಾರು ಉಪ ತಿದ್ದುಪಡಿಗಳೂ ಬಂದಿವೆ. ೩೧-೮-೪೭ರಲ್ಲಿ ಮುಂದುವರಿದ ಸಭೆಯು ರಾಜ್ಯಾಂಗ ರಚನಾಕಾರ್ಯವನ್ನು ಪೂರ್ಣ ಮಾಡಲು ೪-೧೧-೪೮ರವರೆಗೆ ಸೇರಲು ಕಾರಣಾಂತರಗಳಿಂದ ಸಾಧ್ಯ ವಾಗಲಿಲ್ಲ. ಈ ಮಧ್ಯೆ ಎಲ್ಲ ಪ್ರಾಂತಗಳ ಶಾಸನ ಸಭೆಗಳಲ್ಲೂ ಈ ಕರಡು ಚರ್ಚೆಯಾಗಿ ಆ ಶಾಸನ ಸಭೆಗಳ ಸಲಹೆ ಮತ್ತು ಟೀಕೆಗಳು

ಸದಸ್ಯರ ಮುಂದೆ ಇವೆ. ಫೆಡರಲ್ ಕೋರ್ಟು ಮತ್ತು ಹೈಕೋರ್ಟುಗಳ ನ್ಯಾಯಾಧೀಶರ ಅಭಿಪ್ರಾಯಗಳೂ ಕೇಂದ್ರ ಸರಕಾರದ ಶಾಖಾ ಸಚಿವರ ಅಭಿಪ್ರಾಯಗಳೂ, ಕೇಂದ್ರ ಮತ್ತು ಪ್ರಾಂತ ಶಾಸನ ಸಭೆಗಳ ಅಧ್ಯಕ್ಷರುಗಳ ಅಭಿಪ್ರಾಯಗಳೂ ವೃತ್ತಪತ್ರಿಕೆಗಳ ಮತ್ತು ಸಾರ್ವ ಜನಿಕರ ಟೀಕೆಗಳೂ ಸದಸ್ಯರಿಗೆ ದೊರೆತಿವೆ. ೨೭-೧-೪೮ರಲ್ಲಿ ೬ನೆಯ ಬಾರಿ ಒಂದು ದಿನ ಮಾತ್ರ ಸೇರಿ ಕೆಲವು ನಿಯಮಗಳ ತಿದ್ದುಪಡಿಗಳನ್ನು ಮಾತ್ರ ಅಂಗೀಕರಿಸಿತು.

ಈ ಮಧ್ಯೆ ವಿಧಾನ ಸಭೆಯೇ ಸ್ವತಂತ್ರ ಭಾರತದ ಪಾರ್ಲಿಮೆಂಟ್ ಆಗಿ ಕೆಲಸ ಮಾಡಬೇಕಾಗಿ, ೧೯೪೭ರ ನವೆಂಬರ್‌ನಲ್ಲಿ ಮೊದಲನೆಯ ತಾತ್ಕಾಲಿಕ ಆಯುವ್ಯಯ ಅಧಿವೇಶನವೂ ೧೯೪೮ನೆಯ ಜನವರಿ ೨೮ ರಿಂದ ಆಯುವ್ಯಯದ ಅಧಿವೇಶನವೂ ಪುನಃ ೧೯೪೮ನೆಯ ಆಗಸ್ಟ್ ತಿಂಗಳಲ್ಲಿ ಚಳಿಗಾಲದ ಅಧಿವೇಶನವೂ ೧೯೪೯ ಜನವರಿ ೨೮ ರಿಂದ ಪುನಃ ಆಯುವ್ಯಯದ ಅಧಿವೇಶನವೂ ಸೇರಿ ಶಾಸನ ಸಭೆಯ ನಾಲ್ಕು ಅಧಿವೇಶನಗಳು ನಡೆದಿವೆ. ಈಗಿನ ಶಾಸನ ಸಭೆಯ ಮೊದಲನೆಯ ಅಧಿವೇಶನದಲ್ಲಿಯೇ ಶ್ರೀ ಜಿ. ವಿ. ಮಾವಲಂಕರ್ ಅವರನ್ನು ಸ್ವತಂತ್ರ ಭಾರತದ ಪಾರ್ಲಿಮೆಂಟಿನ 'ಸ್ಪೀಕರ್' ಆಗಿ ಆರಿಸಲಾಯಿತು.

ಈ ಎರಡು ವರ್ಷಗಳಲ್ಲಿ ಸ್ವತಂತ್ರ ಭಾರತವು ನಾನಾ ಕಷ್ಟಗಳನ್ನೂ ಜಟಿಲ ಸಮಸ್ಯೆಗಳನ್ನೂ ಎದುರಿಸಬೇಕಾಯಿತು. ಸಹಸ್ರಾರು ವರ್ಷಗಳಿಂದ ಗಾಂಧಾರದಿಂದ ಕಾಮರೂಪದವರೆಗೆ ಒಂದಾಗಿ ಬೆಳಗಿ ಬಾಳಿದ ಭರತ ವರ್ಷವು ವಿಭಾಗವಾಯಿತು. ನೆನ್ನೆಯ ಭಾರತೀಯರು ಇಂದು ವಿದೇಶೀಯರಾದರು. ವಿಭಜನೆಯ ಹಿಂದೆಯೇ ಗಡಿ ಸಮಸ್ಯೆಗಳು—ಅಂಚೆ, ರೈಲು, ರಸ್ತೆಗಳ ವಿಭಜನೆ—ಸೈನ್ಯ ವಿಭಜನೆ, ಸೈನ್ಯ ಮತ್ತು ಸರಕಾರದ ಸಾಮಗ್ರಿ ವಿಭಜನೆ, ಹಣಕಾಸಿನ ವಿಭಜನೆ, ಅಧಿಕಾರಿ ವರ್ಗದ ವಿಭಜನೆ. ಜತೆಯಲ್ಲಿಯೇ ಭಯಂಕರ ಕೋಮು ವಾರು ಕಲಹ, ಕೊಲೆ, ದರೋಡೆ, ಬೆಂಕಿ, ಅತ್ಯಾಚಾರ. ಎರಡು ಕಡೆಯಲ್ಲೂ ಜನರು ತಮ್ಮ ಮಾನವೀಯತೆಯನ್ನು ಮರೆತು ಮೃಗ

ಗಳಂತೆ ವರ್ತಿಸಿದರು. ಪರಿಣಾಮವಾಗಿ ಪಾಕಿಸ್ಥಾನದಿಂದ ಭಾರತಕ್ಕೆ ೮೦ ಲಕ್ಷ ಹಿಂದೂ ನಿರಾಶ್ರಿತರ ಆಗಮನ—ಅವರನ್ನು ನೆಲೆ ನಿಲ್ಲಿಸುವ ಸಮಸ್ಯೆ. ಆಹಾರ ಸಮಸ್ಯೆ, ಆರ್ಥಿಕ ಸಮಸ್ಯೆ, ಕಾಶ್ಮೀರದ ಮೇಲೆ ಆಕ್ರಮಣ, ಹೈದರಾಬಾದ್‌ನಲ್ಲಿ ಅತ್ಯಾಚಾರ, ದೇಶೀಯ ಸಂಸ್ಥಾನಗಳ ಸಮಸ್ಯೆ, ರಾಷ್ಟ್ರಪಿತನ ಕೊಲೆ, ಅಂತಃಕಲಹಗಳು, ಮುಷ್ಕರದ ಭಯ, ಒಂದು ಕಡೆ ಜಲಪ್ರಳಯ, ಇನ್ನೊಂದೆಡೆ ಕ್ಷಾಮ. ಈ ರೀತಿ ಒಂದರ ಮೇಲೊಂದು ಕಠಿಣ ಸಮಸ್ಯೆಗಳು ತಂಡೋಪತಂಡವಾಗಿ ಬಂದು ಮುಸುಕಿದವು. ಪ್ರಾಯಶಃ ಪ್ರಪಂಚದ ಇತಿಹಾಸದಲ್ಲಿ ಸ್ವಾತಂತ್ರ್ಯದ ಆರಂಭದಲ್ಲಿ ಯಾವ ದೇಶದಲ್ಲೂ ಯಾವ ಸರ್ಕಾರವೂ ಇಷ್ಟು ಕಠಿಣ ಸಮಸ್ಯೆಗಳನ್ನು ಎದುರಿಸಿಲ್ಲ; ಅದೆಲ್ಲಕ್ಕೂ ಮಿಗಿಲಾಗಿ ಕೇವಲ ಒಂದೆರಡು ವರ್ಷಗಳಲ್ಲಿ ಆ ಸಮಸ್ಯೆಗಳನ್ನು ಧೈರ್ಯದಿಂದ ರಕ್ತಪಾತವಿಲ್ಲದೆ ಎದುರಿಸಿ ಯಶಸ್ವಿಯಾಗಿ ಬಗೆಹರಿಸಿದ ನಿದರ್ಶನಗಳೂ ಕಡಿಮೆ. ಪ್ರಾಯಶಃ ಇನ್ನಾವ ಸರ್ಕಾರವಾಗಿದ್ದರೂ ಒಂದೊಂದು ಸಮಸ್ಯೆಯ ಭಾರದಿಂದಲೇ ಕುಸಿದು ಬೀಳುತ್ತಿತ್ತು. ಈ ಎಲ್ಲ ಸಮಸ್ಯೆಗಳ ಪರಿಹಾರಕ್ಕಾಗಿಯೂ ದೇಶದ ಆರ್ಥಿಕ ಅಭ್ಯುದಯಕ್ಕಾಗಿಯೂ ಶಾಸನ ರಚನೆಮಾಡುವುದೂ ಭಾರತವು ಸ್ವತಂತ್ರವಾದ ಮರುಕ್ಷಣದಲ್ಲಿಯೇ ಹಿಂದಿನ ಅನೇಕ ಶಾಸನಗಳನ್ನು ನೂತನ ಪರಿಸ್ಥಿತಿಗನುಸಾರವಾಗಿ ತಿದ್ದುಪಡಿ ಮಾಡುವುದೂ ಆವಶ್ಯಕವಾಯಿತು. ದಾಮೋದರ ಕಣಿವೆಯ ಶಾಸನ, ಕೂಲಿಗಾರರ ವಿಮಾ ಶಾಸನ, ಕನಿಷ್ಠ ಪ್ರಮಾಣದ ಕೂಲಿ ಶಾಸನ, ಕೈಗಾರಿಕಾ ಹಣಕಾಸಿನ ಕಾರ್ಪೊರೇಷನ್ ಶಾಸನ, ನಿರಾಶ್ರಿತರಿಗೆ ಕೈಗಾರಿಕೋದ್ಯಮಗಳಲ್ಲಿ ಸಹಾಯ ಮಾಡಲು ಶಾಸನ, ಬ್ಯಾಂಕಿಂಗ್ ಶಾಸನ, ಟೀ ಮಸೂದೆ, ಅಟಾಮಿಕ್ ಶಕ್ತಿಯ ಮಸೂದೆ, ಔದ್ಯೋಗಿಕ ಮತ್ತು ಆಹಾರ ಸಮಸ್ಯೆಗಳ ಮೇಲಿನ ನೀತಿ, ಸ್ಟರ್ಲಿಂಗ್ ಬ್ಯಾಲೆನ್ಸ್ ವಿಷಯ, ವಿದೇಶಾಂಗ ನೀತಿ—ಎಲ್ಲವೂ ಎಲ್ಲ ಪ್ರಜಾ ಪ್ರಭುತ್ವ ಪದ್ಧತಿಯಲ್ಲಿರುವಂತೆ ಪಾರ್ಲಿಮೆಂಟಿನ ಪರಮಾಧಿಕಾರಕ್ಕೆ ಅಧೀನವಾದವು.

**ಈ** ಎಲ್ಲ ಕಾರಣಗಳಿಂದ ರಾಜ್ಯಾಂಗ ಸಭೆಯ ಕ್ರಮವಾದ ಅಧಿವೇಶನವು ೪-೧೨-೪೮ರಲ್ಲಿ ಸಮಾವೇಶಗೊಂಡು ಕರಡು ರಾಜ್ಯಾಂಗ ಶಾಸನದ ಕೆಲವು ವಿಧಿಗಳನ್ನು ಅಂಗೀಕರಿಸಿ ಪುನಃ ಎಂಟನೆಯ ಬಾರಿ ಇದೇ ಮೇ ೧೭ರಿಂದ ಸಮಾವೇಶಗೊಂಡು ಜೂನ್ ೧೬ರ ವರೆಗೆ ಕೆಲಸ ಮಾಡಿದೆ. ಇದುವರೆಗೆ ೨೪೫ ವಿಧಿಗಳನ್ನು ಅಂಗೀಕರಿಸಿದೆ. ಈ ವಿಧಿಗಳಲ್ಲಿ ಭಾರತದ ಒಕ್ಕೂಟದ ವಿಸ್ತಾರ ಮತ್ತು ಅಧಿಕಾರ ವ್ಯಾಪ್ತಿ—ಮೂಲಭೂತ ಹಕ್ಕುಗಳು, ಅವುಗಳ ರಕ್ಷಣೆಗಾಗಿ ಪ್ರತಿಯೊಬ್ಬ ಭಾರತೀಯ ಪ್ರಜೆಗೂ ಇರುವ ಅಧಿಕಾರ, ರಾಷ್ಟ್ರನೀತಿಯ ಮೂಲ ಧ್ಯೇಯಗಳು, ಒಕ್ಕೂಟದ ಅಧಿಕಾರಿವರ್ಗ, ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಆಯ್ಕೆಯ ವಿಧಿಗಳು, ಅವರ ಅಧಿಕಾರದ ಕಾಲಾವಧಿ, ಅರ್ಹತೆ, ಅಧಿಕಾರಗಳು—ಅವರನ್ನು ಪದಚ್ಯುತರನ್ನಾಗಿ ಮಾಡಲು ಅನುಸರಿಸಬೇಕಾದ ಮಾರ್ಗ, ಮಂತ್ರಿ ಸಂಪುಟ, ಭಾರತದ ಶ್ರೇಷ್ಠ ನ್ಯಾಯವಾದಿ, ಸರ್ಕಾರದ ಕಾರ್ಯನಿರ್ವಹಣೆಯ ಮಾರ್ಗ—ಪಾರ್ಲಿಮೆಂಟಿನ ಸಭೆಗಳು, ಕಾಲಾವಧಿ, ಸದಸ್ಯತನದ ಅರ್ಹತೆ—ಪಾರ್ಲಿಮೆಂಟಿನ ಅಧಿಕಾರಿವರ್ಗ, ಪ್ರತಿನಿಧಿ ಸಭೆಗೆ ಸ್ಪೀಕರ್—ಡೆಪ್ಯುಟಿ ಸ್ಪೀಕರ್, ಸಂಸ್ಥಾನಗಳ ಪ್ರತಿನಿಧಿ ಸಭೆಗೆ (Council of States) ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳ ಚುನಾವಣೆ, ಅರ್ಹತೆ, —ಕಾರ್ಯವಿಧಾನ, ಸದಸ್ಯರ ಅನರ್ಹತೆಗಳು, ಹಕ್ಕುಬಾಧ್ಯತೆಗಳು—ಶಾಸನ ನಿರ್ಮಾಣ ರೀತಿ, ಹಣಕಾಸಿನ ಮಸೂದೆಗಳು, ಆಯವ್ಯಯದ ಮಂಜೂರಾತಿ—ವಿಶೇಷ ಅಥವಾ ಅನಿರೀಕ್ಷಿತ ವೆಚ್ಚಗಳಿಗಾಗಿ ಮುಂಗಡದ ಬೇಡಿಕೆ, ಶಾಸನ ಸಭೆಗಳ ನಿಯಮಗಳು, ಅಧ್ಯಕ್ಷರ ವಿಶೇಷಾಧಿಕಾರ—ಒಕ್ಕೂಟದ ನ್ಯಾಯಾಂಗ, ಸೂಪ್ರೀಂ ಕೋರ್ಟಿನ ನ್ಯಾಯಾಧೀಶರ ಅರ್ಹತೆ, ಸಂಬಳ ಸಾರಿಗೆ, ಕಾಲಾವಧಿ, ಸುಪ್ರೀಂ ಕೋರ್ಟಿನ ಅಧಿಕಾರ ವ್ಯಾಪ್ತಿ, ಕ್ರಿಮಿನಲ್ ಮತ್ತು ಸಿವಿಲ್ ವ್ಯವಹಾರಹಗ್ಗಳಲ್ಲಿ ಅಪೀಲ್ ಅಧಿಕಾರ, ಭಾರತದ ಹಣಕಾಸಿನ ಆಡಳಿತಾಧಿಕಾರ—(Comptroller) ಮತ್ತು ಲೆಖ್ಖ ತನಿಖೆ ಅಧಿಕಾರಿ (Auditor

General) ಇವರ ಅಧಿಕಾರ, ಪ್ರಾಂತಗಳ ಗವರ್ನರುಗಳ ನೇಮಕ—ಅವರ ಅಧಿಕಾರ, ಕಾಲಾವಧಿ, ಅರ್ಹತೆ—ಪ್ರಾಂತಗಳಲ್ಲಿ ಮಂತ್ರಿ ಸಂಪುಟ, ಮಂತ್ರಿ ಮಂಡಲದ ಅಧಿಕಾರ, ಪ್ರಾಂತಗಳ ನ್ಯಾಯವಾದಿ, ಸರ್ಕಾರದ ಕಾರ್ಯ ವಿಧಾನ, ಶಾಸನ ಸಭೆಗಳು—ಅವುಗಳ ಅಧಿಕಾರ ವ್ಯಾಪ್ತಿ, ಸದಸ್ಯತನದ ಅರ್ಹತೆ, ಕಾಲಾವಧಿ, ಶಾಸನ ಸಭೆಗಳ ಅಧಿಕಾರಿವರ್ಗ ಅಧ್ಯಕ್ಷರ ಉಪಾಧ್ಯಕ್ಷರ ಚುನಾವಣೆ—ಶಾಸನ ಸಭೆಗಳ ಕಾರ್ಯ ವಿಧಾನ, ಸದಸ್ಯತನವ ಅನರ್ಹತೆ, ಸದಸ್ಯನ ಹಕ್ಕು ಬಾಧ್ಯತೆಗಳು, ಹಣಕಾಸಿನ ಮಸೂದೆಗಳು, ಆಯುವ್ಯಯದ ಮಂಜೂರಾತಿ—ವಿಶೇಷ ವೆಚ್ಚಗಳ ಮುಂಗಡದ ಮಂಜೂರಾತಿ, ಸಾಮಾನ್ಯ ನಿಯಮಗಳು, ಗವರ್ನರ್‌ಗೆ ಇರಬೇಕಾದ ಶಾಸನಾಧಿಕಾರ, ಪ್ರಾಂತಗಳ ಹೈಕೋರ್ಟುಗಳು—ಅವುಗಳ ನ್ಯಾಯಾಧೀಶರ ನೇಮಕ, ಅರ್ಹತೆ, ಕಾಲಾವಧಿ, ಅಧಿಕಾರವ್ಯಾಪ್ತಿ, ನ್ಯಾಯಾಲಯಗಳ ಅಧಿಕಾರಿವರ್ಗ—ಹೈಕೋರ್ಟುಗಳ ಅಧಿಕಾರ ವ್ಯಾಪ್ತಿಯನ್ನು ಹೆಚ್ಚಿಸಲು ಪಾರ್ಲಿಮೆಂಟ್‌ಗೆ ಇರುವ ಅಧಿಕಾರ, ಹೈಕೋರ್ಟುಗಳ ಮೇಲೆ ಪ್ರಾಂತ ಶಾಸನ ಸಭೆಗಳಿಗಿರುವ ಅಧಿಕಾರ ಮಿತಿ, ಒಕ್ಕೂಟ ಮತ್ತು ಪ್ರಾಂತಗಳ ಶಾಸನ ರಚನಾಧಿಕಾರ ಮಿತಿ ಮತ್ತು ಅನಿವಾರ್ಯ ಸಂದರ್ಭಗಳಲ್ಲಿ ಪ್ರಾಂತಾಧಿಕಾರಕ್ಕೆ ಒಳಪಟ್ಟ ವಿಷಯಗಳಮೇಲೆ ಶಾಸನ ಮಾಡಲು ಪಾರ್ಲಿಮೆಂಟಿನ ಅಧಿಕಾರ, ಪಾರ್ಲಿಮೆಂಟ್ ಮತ್ತು ಪ್ರಾಂತ ಶಾಸನಗಳಿಗೆ ವಿರೋಧ ಬಂದಾಗ ಪಾರ್ಲಿಮೆಂಟ್ ಶಾಸನದ ಪಾರಮ್ಯತೆ, ಒಕ್ಕೂಟ ಸರ್ಕಾರಕ್ಕೂ ಪ್ರಾಂತ ಸರ್ಕಾರಗಳಿಗೂ ಇರಬೇಕಾದ ಆಡಳಿತ ಸಂಬಂಧ—ನೀರಿನ ಹಂಚಿಗೆ ವಿಷಯದ ವ್ಯಾಜ್ಯಗಳ ತೀರ್ಮಾನದ ಬಗ್ಗೆ ವಿಧಿಗಳು, ಪ್ರಾಂತ ಪ್ರಾಂತಗಳ ಮಧ್ಯೆ ಇರಬೇಕಾದ ಸಹಾನುವರ್ತನೆ, ಸರ್ಕಾರದ ಆಸ್ತಿ ಮೇಲಿನ ಅಧಿಕಾರ, ಆಸ್ತಿ ಸಂಪಾದಿಸಲು ಅಧಿಕಾರ, ಒಪ್ಪಂದ ಮಾಡಿಕೊಳ್ಳಲು ಅಧಿಕಾರ—ಸರ್ಕಾರದ ಮೇಲೆ ಮೊಕದ್ದಮೆಗಳು, ಚುನಾವಣಾ ಪದ್ಧತಿ, ಚುನಾವಣೆ ಕಮಿಷನ್ ನೇಮಕ—ಅದರ ಅಧಿಕಾರ ಮತ್ತು ವ್ಯಾಪ್ತಿ, ಅಲ್ಪಸಂಖ್ಯಾತರ ಹಕ್ಕುಬಾಧ್ಯತೆಗಳಿಗಾಗಿ ವಿಶೇಷ ವಿಧಿಗಳು—

ಈ ಎಲ್ಲ ವಿಷಯಗಳ ಮೇಲೆ ರಾಜ್ಯಾಂಗ ರಚನೆಯಾಗಿದೆ. ಅನೇಕ ವಿಷಯಗಳಲ್ಲಿ ಕರಡಿನಲ್ಲಿ ಕಂಡ ವಿಧಿಗಳು ಕಾಲಸ್ಥಿತಿಗನುಗುಣವಾಗಿ ಬದಲಾವಣೆಯಾಗಿವೆ.

ಮುಖ್ಯವಾಗಿ ಭಾರತ ರಾಜ್ಯಾಂಗದ ಪೀಠಿಕೆ, ಭಾರತದ ರಾಷ್ಟ್ರಿಕ (Citizen)ನಾಗಲು ಅರ್ಹತೆ, ರಾಷ್ಟ್ರಭಾಷೆ, ಒಕ್ಕೂಟ ಸರ್ಕಾರಕ್ಕೂ ಪ್ರಾಂತ ಸರ್ಕಾರಗಳಿಗೂ ಇರಬೇಕಾದ ಹಣಕಾಸಿನ ಸಂಬಂಧ, ಒಕ್ಕೂಟ ಮತ್ತು ಪ್ರಾಂತಗಳ ಶಾಸನ ವಿಷಯಗಳು, ಪರಿಶಿಷ್ಟಗಳ ಸಮಾಲೋಚನೆ ಇನ್ನೂ ಹಾಗೇ ಉಳಿದಿವೆ.

ಸ್ವತಂತ್ರ ಭಾರತದ ಹುಟ್ಟುಹಬ್ಬವಾದ ೧೫-೮-೧೯೪೯ನೆಯ ದಿನ ಕರಡು ಶಾಸನದ ಚರ್ಚೆಯನ್ನು ಮುಗಿಸಬೇಕೆಂದೂ, ಗಾಂಧೀಜಿಯ ಜನ್ಮದಿನವಾದ ೨-೧೦-೪೯ನೆಯ ದಿನ ರಾಜ್ಯಾಂಗ ಶಾಸನವು ವಿಧಾನ ಸಭೆಯ ಒಪ್ಪಿಗೆ ಪಡೆಯಬೇಕೆಂದೂ, ಭಾರತವು ಸ್ವತಂತ್ರ ರಿಪಬ್ಲಿಕ್ (ಗಣರಾಜ್ಯ) ಎಂದು ಮೊದಲು ಘೋಷಣೆ ಮಾಡಿ, ೨೬-೧-೧೯೫೦ರ ದಿನ ನೂತನ ರಾಜ್ಯಾಂಗ ವ್ಯವಸ್ಥೆಯು ಅನುಷ್ಠಾನಕ್ಕೆ ಬರಬೇಕೆಂದೂ ರಾಜ್ಯಾಂಗ ಸಭೆಯು ತೀರ್ಮಾನಿಸಿದೆ.

ಸಭೆಯು ತನ್ನ ಚರ್ಚೆಗಳನ್ನು ವಿನಾಕಾರಣ ಮುಂದುವರಿಸುತ್ತಿದೆ ಎಂದು ಒಂದು ಆಕ್ಷೇಪಣೆ ಇದೆ. ಆರಂಭವಾದಂದಿನಿಂದ ದೇಶದಲ್ಲಿ ಉದ್ಭವಿಸಿದ ಕಠಿನ ಸಮಸ್ಯೆಗಳು, ರಾಷ್ಟ್ರದ ಮಹಾನಾಯಕರು ಅವುಗಳೆಲ್ಲವನ್ನೂ ಎದುರಿಸಿ, ದೇಶದಲ್ಲಿ ಶಾಂತಿಯನ್ನೂ ಒಗ್ಗಟ್ಟನ್ನೂ ಶಿಸ್ತನ್ನೂ ಸ್ಥಾಪಿಸಲು ಮಾಡಿರುವ ಪ್ರಯತ್ನಗಳನ್ನು ನೋಡಿದರೆ ಈ ಆಕ್ಷೇಪಣೆಗೆ ಸ್ವಲ್ಪವೂ ಬುಡವಿಲ್ಲವೆಂದು ಧಾರಾಳವಾಗಿ ಹೇಳಬಹುದು. ಅಮೇರಿಕ ಸಂಯುಕ್ತ ಸಂಸ್ಥಾನಗಳ ರಾಜ್ಯಾಂಗ ರಚನೆಯನ್ನು ಪೂರೈಸಲು ಏಳೆಂಟು ವರ್ಷಗಳ ಕಾಲ ಶ್ರಮಪಡಬೇಕಾಯಿತು. ಫ್ರಾನ್ಸಿನ ರಾಜ್ಯಾಂಗ ರೂಪಿಸಲು ಎರಡು ವರ್ಷಗಳ ಕಾಲ ಹಿಡಿಯಿತು. ಕೆನಡ ತನ್ನ ರಾಜ್ಯಾಂಗ ರಚಿಸಲು ಮೂರು ವರ್ಷಗಳ ಕಾಲ ತೆಗೆದು ಕೊಂಡಿತು. ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ ಒಂದೊಂದು ವರ್ಷ ತೆಗೆದು

ಕೊಂಡುವು. ಆದರೆ ಅವರ ಎದುರಿನಲ್ಲಿ ಭಾರತವು ಎದುರಿಸಬೇಕಾಗಿ ಬಂದ ಕ್ಲಿಷ್ಟ ಸಮಸ್ಯೆಗಳು ಯಾವುವೂ ಇರಲಿಲ್ಲ.

ರಾಜ್ಯಾಂಗ ಸಭೆಯ ಅಧ್ಯಕ್ಷರು ಶ್ರೀ ಬಾಬು ರಾಜೇಂದ್ರ ಪ್ರಸಾದರು. ಶ್ರೀಯುತರು ಶಾಂತಿಯ ಮೂರ್ತಿಸ್ವರೂಪರು. ಅವರ ಬಾಯಿಂದ ಒಂದು ಕಠಿನ ಶಬ್ದವಾದರೂ ಹೊರಡುವುದಿಲ್ಲ. ಸಭೆಯಲ್ಲಿ ಏಳುವ ಪ್ರಶ್ನೆಗಳನ್ನೆಲ್ಲ ಒಳ್ಳೆಯ ಮಾತಿನಲ್ಲೇ ಬಹು ಸುಲಭವಾಗಿ ಬಿಡಿಸಿ ಅವರು ಯಾರಿಗೂ ಮನ ನೋಯದಂತೆ ಕೆಲಸ ತೂಗಿಸುತ್ತಾರೆ. ಗಾಂಧೀಜಿಯವರ ಸ್ಥಾನಕ್ಕೆ ಬಾಬು ರಾಜೇಂದ್ರಪ್ರಸಾದರೇ ಅರ್ಹರು. ಆಚಾರ್ಯ ಶ್ರೀ ರಾಧಾಕೃಷ್ಣ ಅವರ ವಿಷಯ ಮಾತನಾಡುತ್ತ,

ಮೃದುನಾ ದಾರುಣಂ ಹಂತಿ ಮೃದುನಾ ಹಂತಿ ಅದಾರುಣಂ |
ನಾಸಾಧ್ಯಂ ಮೃದುನಾ ಕಿಂಚಿತ್ ತಸ್ಮಾತ್ ತೀಕ್ಷ್ಣತರಂ ಮೃದು ||

ಎಂದು ಮಹಾಭಾರತದ ವಾಕ್ಯವನ್ನು ಉದ್ಧರಿಸಿ ರಾಜೇಂದ್ರಬಾಬು ಮೃದುತ್ವದ ಅವತಾರ ಎಂದಿದ್ದಾರೆ. ಉಪಾಧ್ಯಕ್ಷರು ಶ್ರೀ ಎಚ್. ಸಿ. ಮೂಖರ್ಜಿಯವರು; ಇವರು ಕ್ರೈಸ್ತರು. ಬಂಗಾಲದಲ್ಲಿ ದೀನಹೀನರ ಸೇವೆಗಾಗಿ ನಿಂತು ಅನೇಕ ವಿದ್ಯಾಸಂಸ್ಥೆಗಳನ್ನು ನಡಸುತ್ತ ಜನಾನುರಾಗಿಗಳಾಗಿದ್ದಾರೆ. ಇವರು ಪ್ರತ್ಯೇಕ ಚುನಾವಣಾ ಪದ್ಧತಿಯನ್ನೂ ಅಲ್ಪಸಂಖ್ಯಾತರಿಗೆ ಮೀಸಲು ಸ್ಥಾನಗಳನ್ನೂ ಮೊದಲಿನಿಂದಲೂ ವಿರೋಧಿಸಿದವರು.

ರಾಜಕೀಯ ಸಲಹೆಗಾರರಾದ ಶ್ರೀ ಬೆನಗಲ್ ರಾಮರಾಯರಿಗೆ ರಾಜ್ಯಾಂಗ ಶಾಸನಗಳೆಂದರೆ ನೀರು ಕುಡಿದಂತೆ. ಅವರ ವಿಷಯ ಮಾತನಾಡುತ್ತ ಶ್ರೀ ಎಂ. ಆರ್. ಜಯಕರ್, "ರಾಜ್ಯಾಂಗ ಶಾಸನಗಳ ಮಹಾ ಪಂಡಿತರು, ಶೀಲ ಸೌಜನ್ಯತೆಯ ಆದರ್ಶ ವ್ಯಕ್ತಿಗಳು, ಅತಿ ಸ್ವತಂತ್ರ ಮನೋಭಿಪ್ರಾಯದವರು" ಎಂದು ಹೊಗಳಿದ್ದಾರೆ. ಸ್ವತಂತ್ರಭಾರತದ ರಾಜ್ಯಾಂಗರಚನೆಗೆ ಇವರೇ ಬಹುಮಟ್ಟಿಗೆ ಕಾರಣರು. ಆರಂಭದಲ್ಲಿ ಶ್ರೀ ಎನ್. ಗೋಪಾಲಸ್ವಾಮಿ ಅಯ್ಯಂಗಾರ್ಯರು ರಾಜ್ಯಾಂಗ ರಚನೆಯ ಮೂಲತತ್ವಗಳನ್ನು ಪ್ರತಿಪಾದಿಸುತ್ತಿದ್ದರು. ಅವರ

ಆಡಳಿತದ ಅನುಭವ ಅಪಾರವಾದುದು. ಎಲ್ಲ ವಿರೋಧಪಕ್ಷದವರನ್ನೂ ಹಸನ್ಮುಖರಾಗಿ ಕೇಳುತ್ತ, ಯಾರಿಗೂ ಮನನೋಯಿಸದಂತೆ ನಾಲ್ಕೇ ಮಾತುಗಳಲ್ಲಿ ವಿರೋಧವನ್ನೆಲ್ಲ ಸುಲಭವಾಗಿ ಜೀರ್ಣಿಸಿಕೊಳ್ಳುತ್ತಿದ್ದ ವ್ಯಕ್ತಿಗಳು. ಎತ್ತರದ ನಿಲುವು, ಆಳವಾಗಿ ನೋಡುವ ತೀಕ್ಷ್ಣ ದೃಷ್ಟಿ, ಮೃದುಹಾಸ್ಯದ ನಗುಮೊಗದ ಮಾತುಗಳು. ಡ್ರಾಫ್ಟಿಂಗ್ ವರದಿಯು ಬಂದಮೇಲೆ ಈಗ ಡಾಕ್ಟರ್ ಅಂಬೇಡ್ಕರ್‌ರೇ ಕರಡು ರಚನೆಯನ್ನು ಪ್ರತಿಪಾದಿಸುತ್ತಿದ್ದಾರೆ. ಡಾಕ್ಟರ್ ಅಂಬೇಡ್ಕರ್‌ರವರ ವಿದ್ವತ್ತು ಅಪಾರವಾದುದು. ಅವರು ಬಹು ಸ್ಪಷ್ಟವಾಗಿಯೂ ಆಧಾರ ಭೂತವಾಗಿಯೂ ಮಾತನಾಡುತ್ತಾರೆ. ಅವರು ಪಟ್ಟುಹಿಡಿದರೆ ಕದಲಿಸುವುದು ಕಷ್ಟ. ಆದರೆ ತಮ್ಮ ವಾದವು ತಪ್ಪೆಂದು ಮನಗಂಡರೆ ಒಡನೆ ಒಪ್ಪಿಕೊಳ್ಳುತ್ತಾರೆ. ಸ್ವಲ್ಪ ಕಠಿನವಾದಿಗಳು. ಒಮ್ಮೆ ಒಬ್ಬರಿಗೆ " ಗ್ಯಾಲರಿಗಳು ಖಾಲಿ ಇವೆ. ಸಭೆಯ ಕಾಲಹರಣ ಏಕೆ ಮಾಡುತ್ತೀರಿ " ಎಂದರು. ಶ್ರೀಮತಿ ಸರೋಜಿನಿಯವರು ಭವಿಷ್ಯವಾದಿಗಳಂತೆ " ಇಂದು ಇಷ್ಟು ಕಠಿಮನಸ್ಸಿನವರಾದ ಡಾ॥ ಅಂಬೇಡ್ಕರ್ ಬಹು ಸ್ವಲ್ಪಕಾಲದಲ್ಲೇ ಈ ವಿಧಾನ ಸಭೆಯ ಎಲ್ಲ ಉದ್ದೇಶಗಳಿಗೂ ಪ್ರಬಲ ಸಮರ್ಥಕರಾಗು ತ್ತಾರೆ. ಅವರ ಮೂಲಕ ಅವರ ಕೋಟ್ಯಂತರ ಅನುಯಾಯಿಗಳಿಗೆ ಉತ್ತಮರಂತೆ ತಮಗೂ ಇಲ್ಲಿ ಪೂರ್ಣ ರಕ್ಷಣೆ ದೊರೆಯುತ್ತದೆ ಎಂಬ ಭರವಸೆ ಬರುವುದೆಂದು ಆಶಿಸುತ್ತೇನೆ ಮತ್ತು ಈ ನನ್ನ ಆಸೆಯು ಸರಿ ಎಂದೂ ನಂಬಿದ್ದೇನೆ" ಎಂದರು. ಈಗ ಆ ವಾಣಿ ಕೇಳದು. ಆದರೆ ಆ ಭವಿಷ್ಯ ಮಾತ್ರ ಸತ್ಯವಾಗಿದೆ! ಅಂಬೇಡ್ಕರ್ ಒಬ್ಬ ಆಧುನಿಕ ಮನು. ನ್ಯಾಯಶಾಸ್ತ್ರ ಅಥವಾ ರಾಜ್ಯಾಂಗದ ಕ್ಲಿಷ್ಟ ಸಮಸ್ಯೆಗಳು ಬಂದರೆ ಶ್ರೀ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ಅಭಿಪ್ರಾಯವೇ ವೇದ ವಾಕ್ಯ, ಅವರ ಜೊತೆಗೆ ಶ್ರೀ ಕೆ. ಎಂ. ಮುನ್ಷಿ, ಅನಂತಶಯನಂ ಅಯ್ಯಂಗಾರ್, ಶ್ರೀ ಸಂತಾನಂ, ಡಾಕ್ಟರ್ ಭಕ್ಷಿ, ಟೇಕ್‌ಚಂದ್, ಪಂಡಿತ್ ಥಾಕೂರ್‌ದಾಸ್ ಭಾರ್ಗವ ಮತ್ತು ಡಾಕ್ಟರ್ ಪಿ. ಕೆ. ಸೇನ್ ಇದ್ದಾರೆ. ಡಾಕ್ಟರ್ ಹೃದಯನಾಥ ಕುಂಜ್ರು ಅವರ ಅಭಿಪ್ರಾಯಕ್ಕೆ

ತುಂಬ ಗೌರವವಿದೆ. ಪ್ರೊಫೆಸರ್ ಕೆ. ಟಿ. ಷಾ ಅಮೇರಿಕದ ಅಧ್ಯಕ್ಷ ಗಿರಿಯ ಪ್ರಜಾಪ್ರಭುತ್ವದ ಪ್ರತಿಪಾದನಾಚಾರ್ಯರು. ಆದರೆ ಭಾರತದ ರಿಪಬ್ಲಿಕ್‌ಗೆ ಒಬ್ಬ ಅಧ್ಯಕ್ಷರಿದ್ದರೂ ಅಮೆರಿಕೆಯ ಅಧ್ಯಕ್ಷನ ಅಧಿಕಾರ ಆತನಿಗಿಲ್ಲ. ಇಂಗ್ಲೆಂಡಿನ ದೊರೆಯಂತೆ ಪಾರ್ಲಿಮೆಂಟಿಗೆ ಹೊಣೆಗಾರ ನಾಗಿ, ಮಂತ್ರಿಮಂಡಲದ ಸಲಹೆಯಂತೆ ನಡೆಯತಕ್ಕವನು. ಆದ್ದರಿಂದ ಪ್ರೊಫೆಸರ್ ಷಾರವರ ಅಭಿಪ್ರಾಯಗಳಿಗೆ ಸಭೆಯ ಪುರಸ್ಕಾರ ದೊರೆತಿಲ್ಲ. ಶ್ರೀ ಎಚ್. ವಿ. ಕಾಮತ್, ಪ್ರೊಫೆಸರ್ ಶೀಬನ್‌ಲಾಲ್ ಸಕೇನ್ಸಾ, ಶ್ರೀ ಮಹಾವೀರ ತ್ಯಾಗಿ ಸಾಮಾನ್ಯವಾಗಿ ಎಲ್ಲ ವಿಷಯಗಳ ಮೇಲೂ ಮಾತ ನಾಡಲೇಬೇಕು. ಅಸ್ಸಾಮಿನ ರೋಹಿಣಿ ಕುಮಾರ ಚೌಧರಿ ಯಾವ ಯಾವ ವಿಷಯದ ಮೇಲೆ ಮಾತನಾಡಿದರೂ ಹಾಸ್ಯ ತುಂಬಿರುತ್ತದೆ. ಮನುಷ್ಯ ಆರಡಿ ಎತ್ತರದ ಅಜಾನುಬಾಹು, ಕೆದರಿದ ಕೂದಲು, ರೋಮನರ ಟೋಗಾದಂತೆ ಮೇಲ್ವಸ್ತ್ರ, ದಪ್ಪನಾದ ಮೂಗು, ಆನೆ ಮೈಯೊಳಗಿನಿಂದ ಹುಡುಕಿ ನೋಡುವಂತೆ ತೀಕ್ಷ್ಣವಾದ ಕಣ್ಣುಗಳು. ವ್ಯಕ್ತಿಯನ್ನು ನೋಡಿದರೇ ನಗು ಬರಬೇಕು; ಮಾತೂ ಹಾಗೇನೆ. ತಿದ್ದುಪಡಿಗಳನ್ನು ಕಳುಹಿಸವುದರಲ್ಲಿ ನಾಜಿರುದ್ದೀನ್ ಅಹಮದ್ ಎತ್ತಿದ ಕೈ. ಅಲ್ಪವಿರಾಮ, ಅರ್ಧವಿರಾಮ, ಸಣ್ಣ ಅಕ್ಷರ, ದಪ್ಪ ಅಕ್ಷರ, ವ್ಯಾಕರಣದ ತಪ್ಪುಗಳು ಎಲ್ಲಿ ಅಡಗಿದ್ದರೂ ಕಣ್ಣಿಗೆ ಬೀಳಬೇಕು. ಇವರೊಬ್ಬರೆ ಎರಡು ಸಾವಿರ ತಿದ್ದುಪಡಿಗಳನ್ನು ಸಿದ್ಧಮಾಡಿದ್ದರಂತೆ! ಪುಣ್ಯವಶಾತ್ ಇವರು ರೈಲಿನಲ್ಲಿ ಬರುವಾಗ ಯಾರೋ ಒಬ್ಬ ಇವರ ಕೈಚೀಲವನ್ನು ಕದ್ದು ಸಭೆಗೆ ಉಪಕಾರ ಮಾಡಿದ. ಪಂಡಿತ್ ನೆಹರು ಮತ್ತು ಸರ್ದಾರ್ ಪಟೇಲ್ ಮಾತನಾಡುವುದೇ ಕಡಮೆ. ಯಾವಾಗ ಮಾತನಾಡಿದರೂ ಅವರ ಮಾತಿಗೆ ಜಯವೂ ಸಿದ್ಧ. ಪಂಡಿತ ನೆಹರೂ ಭಾವಾವೇಶದಿಂದ ಮಾತನಾಡುತ್ತಾರೆ. ಅವರ ದೃಷ್ಟಿ ಅಂತರ ರಾಷ್ಟ್ರೀಯ ದೃಷ್ಟಿ. ಅವರು ಒಂದು ತಲೆಮಾರಾದರೂ ಮುಂದೆ ನೋಡಿರುತ್ತಾರೆ. ಸರ್‌ದಾರ್ ಪಟೇಲ್ ಖಂಡಿತವಾದಿಗಳು. ನಯ, ಅಲಂಕಾರ ಅವರಿಗೆ ಸಾಧ್ಯವಿಲ್ಲ. ಅವರಿಂದ ಯಾವುದನ್ನೂ ಮುಚ್ಚಿಡಲು

ಸಾಧ್ಯವಿಲ್ಲ. ಹೇಗೋ ಗುಟ್ಟನ್ನು ತಿಳಿದುಕೊಳ್ಳುತ್ತಾರೆ. ಮನಸ್ಸಿನ ಲ್ಲೊಂದು, ಹೊರಗೊಂದು ಅವರ ಸ್ವಭಾವವಲ್ಲ. ಮನಸ್ಸಿಗೆ ಸರಿಯೆಂದು ಕಂಡುದನ್ನು ಮುಚ್ಚುಮರೆ ಇಲ್ಲದೆ ಹೇಳುವ ಪ್ರಕೃತಿ. ಬ್ರಿಟಿಷರ ಆಳ್ವಿಕೆಯ ಒಂದು ನೂರು ಐವತ್ತು ವರ್ಷಗಳ ಇತಿಹಾಸವನ್ನು ಅಳಿಸಿ, ಕೇವಲ ೧೮ ತಿಂಗಳಲ್ಲಿ ಇವರು ದೇಶೀಯ ಸಂಸ್ಥಾನಗಳ ಸಮಸ್ಯೆಯನ್ನು ನಿವಾರಿಸಿ, ದೇಶದಲ್ಲಿ ಒಗ್ಗಟ್ಟನ್ನೂ ಶಾಂತಿಯನ್ನೂ ಸ್ಥಾಪಿಸಿದರು. ಇದನ್ನು ಕಂಡು "ಲಂಡನ್ ಟೈಮ್ಸ್" ಪತ್ರಿಕೆ "ಸರದಾರ್ ಪಟೇಲ್ ಬಿಸ್ಮಾರ್ಕ್‌ನನ್ನು ಮೀರಿಸಿದ್ದಾರೆ" ಎಂದಿದೆ. ಭಾರತದ ಒಳಗಿನ ಮುಳ್ಳು ಹೆಂಟೆಗಳನ್ನೆಲ್ಲ ನಿರ್ಮೂಲ ಮಾಡಿ, ಒಗ್ಗಟ್ಟನ್ನು ತಂದು, ಭಾರತವನ್ನು ಅಜೇಯವನ್ನಾಗಿ ಮಾಡದೆ ಮಡಿಯ ಕೂಡದೆಂದು ಅವರ ಹಿರಿಯಾಸೆ. ಸಭೆಯ ಇನ್ನೊಂದು ಪ್ರಮುಖ ವ್ಯಕ್ತಿ ಎಂದರೆ ಕಾಂಗ್ರೆಸ್ ಪಾರ್ಟಿಯ ಮುಖ್ಯ ಸಂಚಾಲಕ ಶ್ರೀ ಸತ್ಯ ನಾರಾಯಣ ಸಿಂಹ. ಸದಾ ಹಸನ್ಮುಖಿ. ಈ ಎರಡು ವರ್ಷಗಳಲ್ಲಿ ಶ್ರೀ ಸಿಂಹ ಕೋಪಗೊಂಡು ವಾಜ್ಯವಾಡಿದುದನ್ನು ನಾನು ಕಂಡಿಲ್ಲ. ಸರ್ಕಾರದ ಅಧಿಕಾರಿವರ್ಗ, ಕಾಂಗ್ರೆಸ್ ಪಾರ್ಟಿಯ ಸದಸ್ಯರು, ಕಾಂಗ್ರೆಸ್ಸೇತರ ಸದಸ್ಯರು ಎಲ್ಲರೊಂದಿಗೂ ಸ್ನೇಹ. ನಾನಾ ಪ್ರಾಂತ ಗಳಿಂದ ನಾನಾ ಮಟ್ಟದಿಂದ ಬಂದಿರುವ ಎಲ್ಲ ಸದಸ್ಯರ ಪ್ರೇಮವನ್ನು ಸಂಪಾದಿಸಿ, ರಾಜ್ಯಾಂಗ ಸಭೆ ಮತ್ತು ಶಾಸನ ಸಭೆಗಳ ಕಾರ್ಯ ಗಳೆರಡನ್ನೂ ಆಕ್ಷೇಪಣೆ ಇಲ್ಲದಂತೆ ತೂಗಿಸಿಕೊಂಡು ಹೋಗುವ ವ್ಯಕ್ತಿ ಶ್ರೀ ಸತ್ಯನಾರಾಯಣ ಸಿಂಹ!

ರಾಜ್ಯಾಂಗ ಸಭೆಯು ಶಾಸನ ಸಭೆಯಾಗಿ ಕೆಲಸ ಮಾಡುವಾಗ ಶ್ರೀ ಜಿ. ವಿ. ಮೌಲಂಕರ್ ಅಧ್ಯಕ್ಷತೆ ವಹಿಸುತ್ತಾರೆ. ಮಹಾರಾಷ್ಟ್ರ ದವರಾದರೂ ಇವರು ಗುಜರಾತಿನ ಕೇಂದ್ರವಾದ ಅಹಮದಾಬಾದಿನಲ್ಲಿ ನೆಲಸಿ, ಸರದಾರರ ಬಲಗೈಯಂತಿದ್ದಾರೆ. ಎಲ್ಲರಿಗೂ ಅವರು ದಾದಾಸಾಹೇಬ್! ಗುಜರಾತ್ ವಿಶ್ವವಿದ್ಯಾನಿಲಯದ ನಿರ್ಮಾಣ ಕರ್ತರು—ಅನೇಕ ವಿದ್ಯಾಸಂಸ್ಥೆಗಳ ಪೋಷಕರು—ಸಂಚಾಲಕರು.

ಈಗ ಕಸ್ತೂರಿಬಾ ಟ್ರಸ್ಟಿನ ಸದಸ್ಯರು. ಮೌಲಂಕರ್ ಎಂದರೆ ಎಲ್ಲರಿಗೂ ಗೌರವ. ಹಿಂದೆ ಮುಂಬೈ ಶಾಸನ ಸಭೆಗೆ, ಅನಂತರ ಕೇಂದ್ರ ಶಾಸನ ಸಭೆಗೆ ಅಧ್ಯಕ್ಷರಾಗಿದ್ದರು. ಪುನಃ ಸ್ವತಂತ್ರ ಭಾರತದ ಪಾರ್ಲಿಮೆಂಟಿನ ಪ್ರಥಮ ಸ್ಪೀಕರ್ ಆಗಿದ್ದಾರೆ. ಅವರು ಅಧ್ಯಕ್ಷ ಪೀಠದಲ್ಲಿ ಕುಳಿತು ಸಭೆಯನ್ನು ನಡೆಸುವುದೇ ಒಂದು ಮಾದರಿ. ಪ್ರಪಂಚದ ನಾನಾ ಪಾರ್ಲಿಮೆಂಟ್‌ಗಳನ್ನು ನೋಡಿ ಬಂದವರು. ಭಾರತದ ಪಾರ್ಲಿಮೆಂಟ್ ಘನತೆ ಗಾಂಭೀರ್ಯದಲ್ಲಿ ಯಾವ ಪಾರ್ಲಿಮೆಂಟ್‌ಗೂ ಕಡಿಮೆಯಾಗಿಲ್ಲವೆಂದಿದ್ದಾರೆ. ಶ್ರೀ ಮೌಲಂಕರ್ ಹೊರಗೆ ನೋಡಲು ಸ್ವಲ್ಪ ಬಿರುಸಾಗಿದ್ದರೂ ತುಂಬ ಸ್ನೇಹಪರರು. ಧೈರ್ಯದಿಂದ ಕೆಲಸ ಮಾಡುವ ಉತ್ಸಾಹಿಗಳಿಗೆ ಒಳ್ಳೆಯ ಪ್ರೋತ್ಸಾಹಕರು. ಗಾಂಧೀ ತತ್ವದಲ್ಲಿ ಅಚಲಶ್ರದ್ಧೆ ಮತ್ತು ನಂಬಿಕೆಯುಳ್ಳವರು.

ಪಾರ್ಲಿಮೆಂಟಿನಲ್ಲಿ ನಿತ್ಯವೂ ಶ್ರೀ ಸಿಧ್ವಾರವರ ಐದು ಪ್ರಶ್ನೆಗಳಿರಲೇಬೇಕು. ಇವರು ಸಿಂಧು ದೇಶದಿಂದ ಬಂದು ಈಗ ನಾಗಪುರದಲ್ಲಿ ನೆಲಸಿದ್ದಾರೆ. ಹಣಕಾಸಿನ ವಿಷಯಗಳಲ್ಲೂ, ರಾಜ್ಯಾಂಗ ರಚನೆ ವಿಚಾರದಲ್ಲೂ ಶ್ರೀ ಟಿ. ಟಿ. ಕೃಷ್ಣಮಾಚಾರ್ಯರು ಸಮರ್ಥರು. ವ್ಯಾಪಾರೋದ್ಯಮದಲ್ಲಿ ತೊಡಗಿದ್ದರೂ ಅವರ ಜ್ಞಾನದಾಹ, ಗ್ರಂಥ ಪರಿಚಯ ಮತ್ತು ವ್ಯವಹಾರದ ಅನುಭವ ಅಪಾರ. ಮಧ್ಯಪ್ರಾಂತದ ಡಾಕ್ಟರ್ ಪಂಜಾಬ್‌ದಾಸ್ ದೇಶಮುಖ್ ತುಂಬ ಪ್ರತಿಭಾವಂತರು. ಪುರುಷೋತ್ತಮದಾಸ್ ತಾಂಡನ್‌ಜಿ, ಘನಶ್ಯಾಮಸಿಂಗ್ ಗುಪ್ತ, ಸೇಠ್ ಗೋವಿಂದ ದಾಸ್, ಶ್ರೀ ಬಾಲಕೃಷ್ಣ ಶರ್ಮ ಇವರು ದೇವನಾಗರಿ ಲಿಪಿಯ ಹಿಂದಿಯೇ ರಾಷ್ಟ್ರಭಾಷೆಯಾಗಬೇಕೆನ್ನುವ ಉಗ್ರವಾದಿಗಳು. ಸಭೆಯಲ್ಲಿ ಡಾಕ್ಟರ್ ಪಟ್ಟಾಭಿ ಸೀತಾರಾಮಯ್ಯನವರು, ಶ್ರೀ ಟಿ. ಪ್ರಕಾಶಂ, ಶ್ರೀ ಥಕ್ಕರ್ ಬಾಪಾ, ಶ್ರೀ ಹರಿಸಿಂಗ್ ಗೌರ್ ಮುಂತಾದ ಹಳೆಯ ಹುಲಿಗಳ ವೀರವಾಣಿಯನ್ನು ಆಗಾಗ ಕೇಳಬಹುದು. ಆಚಾರ್ಯ ಕೃಪಲಾನಿಯವರು ಖಂಡಿತವಾದಿಗಳು. ಪಂಡಿತ ಗೋವಿಂದಕಾಂತ ಮಾಲವೀಯ ೧೯೪೭ನೆಯ ಆಗಸ್ಟ್ ೧೫ನೆಯ ರಾತ್ರಿ

ರಾಜ್ಯಾಂಗ ಸಭೆಯಲ್ಲೇ ಪಾಂಚಜನ್ಯಧ್ವನಿಗೈದ ವ್ಯಕ್ತಿ. ಸಮತಾವಾದದ ಮೌಲಾನ ಹಜರತ ಮೋಹನಿಯವರೂ ಸಾಮ್ಯವಾದದ ಸೇಠ್ ದಾಮೋದರ ಸ್ವರೂಪ್, ಶೀಬ್ಬಲಾಲ್ ಸಕ್ಸೇನಾ, ಕೆ. ಟಿ. ಷಾ ಮತ್ತು ಮುಸ್ಲಿಂ ಲೀಗ್ ಮನೋಭಾವದ ಮಹಮ್ಮದ್ ಇಸ್ಮೇಲರೂ ಬಂಡವಾಳಗಾರರಾದ ಶ್ರೀ ಬಿರ್ಲಾ, ಸಿಂಘಾಣಿಯಾ ಮುಂತಾದವರೂ ಸಭೆಯಲ್ಲಿ ಇದ್ದಾರೆ. ಶ್ರೀ ಎಚ್. ಪಿ. ಮೋದಿಯವರು ಮೊನ್ನೆ ತಾನೆ ಯುಕ್ತ ಪ್ರಾಂತದ ಗವರ್ನರ್‌ರು. ಈ ರೀತಿ ಭಾರತದ ನಾನಾ ಪ್ರಾಂತಗಳಿಂದ ನಾನಾ ರಾಜಕೀಯ ಮನೋಭಾವದ ಜನರು ಭಾರತದ ರಾಜ್ಯಾಂಗ ರಚನೆಯನ್ನು ರೂಪಿಸುತ್ತಿದ್ದಾರೆ.

ಭಾರತದೇಶ ಎಲ್ಲರಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವಿರುವ ಭಾವನೆ, ಅಭಿಪ್ರಾಯ, ನಂಬಿಕೆ, ಧರ್ಮ ಮತ್ತು ಪೂಜಾ ಸ್ವಾತಂತ್ರ್ಯ ದೊರೆಯುವ, ಸಮಾನ ಅಂತರ ಮತ್ತು ಅವಕಾಶವಿರುವ ವ್ಯಕ್ತಿಗೌರವ ಮತ್ತು ರಾಷ್ಟ್ರದ ಒಗ್ಗಟ್ಟಿಗೆ ಪ್ರೋತ್ಸಾಹ ಕೊಟ್ಟು, ಸೋದರಭಾವ ಬೆಳೆಸುವ, ಸರ್ವತಂತ್ರ ಸ್ವತಂತ್ರ ಪ್ರಜಾಪ್ರಭುತ್ವ ಪದ್ಧತಿಯ ಪ್ರಜಾರಾಜ್ಯವಾಗಿ ಇರಬೇಕೆಂದೇ ಎಲ್ಲರ ಗುರಿ. ಈ ಗುರಿಯ ಸಾಧನೆಯಲ್ಲಿ ಏನು ತೊಂದರೆ ಬಂದರೂ ಅದನ್ನು ನಿವಾರಿಸಿ ಮುಂದುವರಿಯಬೇಕೆಂಬ ದೃಢಸಂಕಲ್ಪ ಸಭೆಗಿದೆ. ಸ್ವತಂತ್ರ ಭಾರತದ ಜನಶಕ್ತಿಯನ್ನು, ಪ್ರಕೃತಿ ಸಂಪತ್ತನ್ನು ಈ ಗುರಿಗೆ ಅನುಗೊಳಿಸಿ, ಅಭಿವೃದ್ಧಿಗೊಳಿಸಿ, ಭಾರತವು ಒಂದು ಬಲಯುತ ಪ್ರಪಂಚ ಶಕ್ತಿಯಾಗಿ, ಯುದ್ಧ ಸಂತಪ್ತ ಪ್ರಪಂಚಕ್ಕೆ ಶಾಂತಿಯ ಮಳೆಗರೆದು, ಮಾನವ ಸೌಖ್ಯಕ್ಕೆ ಅಣಿಯಾಗುವಂತೆ ರಾಷ್ಟ್ರದ ರಾಜ್ಯಾಂಗ ರಚನೆಯನ್ನು ರೂಪಿಸಬೇಕೆಂಬುದೇ ಸಭೆಯ ಮಹದಾಸೆ.

ಭಾರತ ಜನಕೋಟಿಯ ಏಕೈಕ ಪ್ರತಿನಿಧಿಯಾಗಿ ಲಂಡನ್ ಯಾತ್ರೆ ಮಾಡಿದ ಬಾಪೂಜಿಯ ಭಾವಚಿತ್ರ, ಎದುರಿನಲ್ಲಿ ಸುತ್ತಲೂ ಬೃಹದಾಕಾರದ ರಾಷ್ಟ್ರಧ್ವಜಗಳು, ಭಾರತ ಜನತೆಯ ಪ್ರತಿನಿಧಿಗಳನ್ನು ಈ ಗುರಿಯ ಕಡೆ ಕರೆದೊಯ್ಯುತ್ತಿವೆ. ಇನ್ನುಳಿದಿರುವ ದಾರಿ ಅತ್ಯಲ್ಪ.

ಭಾರತ್ ಪ್ರಿಂಟಿಂಗ್ ಪ್ರೆಸ್, ಉತ್ತರಾದಿಮಠದ ಬೀದಿ, ಮೈಸೂರು

# ಉಷಾ ಸಾಹಿತ್ಯ ಮಾಲೆ, ಮೈಸೂರು

## ಕಾದಂಬರಿಗಳು

| | | | | | |
|---|---|---|---|---|---|
| ೧* | ರಕ್ತತರ್ಪಣ | ತ. ರಾ. ಸು. | ೧ | ೮ | ೦ |
| ೨* | ಪಯಣದ ಹಾದಿಯಲ್ಲಿ | ಎಸ್. ಅನಂತನಾರಾಯಣ | ೧ | ೧೨ | ೦ |
| ೩* | ಕಣ್ಣೀರು | ಅ. ನ. ಕೃಷ್ಣರಾಯ | ೧ | ೧೨ | ೦ |
| ೪ | ಅಸ್ಥಿಪಂಜರ | ಅರ್ಚಿಕ ವೆಂಕಟೇಶ | ೩ | ೦ | ೦ |
| ೫ | ನಾಲ್ಕನೆಯ ಮನೆ | ನರೇಂದ್ರಬಾಬು | ೨ | ೦ | ೦ |
| ೬ | ಕನಸಿನ ಮನೆ | ವಿ. ಎಂ. ಇನಾಂದಾರ್ | ೩ | ೦ | ೦ |
| ೭* | ಶಂಖವಾದ್ಯ | ನಾ. ಕಸ್ತೂರಿ | ೧ | ೧೨ | ೦ |
| ೮ | ತತ್ವಜೀವಿ | ಎನ್. ಸೂರಪ್ಪ | ೧ | ೧೨ | ೦ |
| ೯ | ಹೇಮಾವತಿ | ಗೊ. ರಾಮಸ್ವಾಮಯ್ಯಂಗಾರ್ | ೩ | ೮ | ೦ |
| ೧೦ | ಸನ್ಯಾಸಿಯ ಬದುಕು | ಶಿವರಾಮ ಕಾರಂತ | ೨ | ೮ | ೦ |
| ೧೧ | ಕುಮಾರ ಸಂಭವ | ಶ್ರೀರಂಗ | ೨ | ೧೨ | ೦ |
| ೧೨ | ಕೊನೆಯ ದಾರಿ | ಕೃಷ್ಣಮೂರ್ತಿ ಪುರಾಣಿಕ | ೩ | ೦ | ೦ |
| ೧೩ | ಭಸ್ಮಾಸುರ | ಮಿರ್ಜಿ ಅಣ್ಣಾರಾಯ | ೧ | ೮ | ೦ |
| ೧೪ | ಶಾಪ | ವಿ. ಎಂ. ಇನಾಂದಾರ್ | ೩ | ೦ | ೦ |

## ಬಿಡಿ ಮುತ್ತುಗಳು

| | | | | | |
|---|---|---|---|---|---|
| ೧ | ಕಾರಂತರ ಕಾದಂಬರಿಗಳು (ವಿಮರ್ಶೆ) | ಎಸ್. ಅನಂತನಾರಾಯಣ | ೨ | ೦ | ೦ |
| ೨ | ಉಷಾ ಸ್ವಪ್ನ (ಕವನಗಳು) | ,, ,, | ೧ | ೦ | ೦ |
| ೩ | ಅಗ್ನಿ ಕನ್ಯೆ (ಕತೆಗಳು) | ಅ. ನ. ಕೃಷ್ಣರಾಯ | ೨ | ೦ | ೦ |
| ೪ | ಮುತ್ತು ಹವಳ (ಪ್ರಬಂಧ ಸಂಗ್ರಹ) | ಬೇರೆ ಬೇರೆ ಬರಹಗಾರರಿಂದ | ೨ | ೪ | ೦ |
| ೫ | ಜಗಜ್ಜ್ಯೋತಿ ಬಸವೇಶ್ವರ (ಏಳಂಕಿನ ನಾಟಕ) | ಅ. ನ. ಕೃಷ್ಣರಾಯ | ೨ | ೦ | ೦ |
| ೬ | ಮೂರಾಬಟ್ಟೆ (ಕಾದಂಬರಿ) | ವಿ. ಎಂ. ಇನಾಂದಾರ್ | ೩ | ೧೫ | ೦ |
| ೭ | ನಟಸಾರ್ವಭೌಮ ,, | ಅ. ನ. ಕೃಷ್ಣರಾಯ | ೧೦ | ೦ | ೦ |
| ೮ | ಯಶೋಧರ ಚರಿತೆ (ಕಾವ್ಯ) | ಕ. ವೆಂ. ರಾಘವಾಚಾರ್ | ೨ | ೪ | ೦ |
| ೯ | ದಿಲ್ಲಿಯ ಪತ್ರಗಳು | ಎಸ್. ವಿ. ಕೃಷ್ಣಮೂರ್ತಿರಾವ್ | ೧ | ೮ | ೦ |

ಅಚ್ಚಿನಲ್ಲಿ

ರೂಪದರ್ಶಿ — ಕೆ. ವಿ. ಐಯರ್

ಐಸಾಕ್ ನ್ಯೂಟನ್ — ಎನ್. ಎಸ್. ವೀರಪ್ಪ

* ಈ ಗುರುತು ಹಾಕಿದ ಕಾದಂಬರಿಗಳು ಸಿಗುವುದಿಲ್ಲ.